ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

---

ಶ್ರೀಮದ್ಭಾಗವತದೊಳಗಣ

ಯಕ್ಷಗಾನ

# ಯಾದವಾಭ್ಯುದಯ

ಲೇಖಕ:

**ಪೆರಡಾಲ ಕೃಷ್ಣಯ್ಯ,** ವಿದ್ವಾನ್,

ಕನ್ನಡ ಪಂಡಿತ, ಮಹಾಜನ ಸಂಸ್ಕೃತ ಕೋಲೇಜ್,

ಪೆರಡಾಲ, ಕಾಸರಗೋಡು, ದ. ಕ.

ಪ್ರಥಮ ಮುದ್ರಣ.

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1936.

ಬೆಲೆ: 0—5—0.

*(All rights reserved.)*

398.2092
KRI

ಅಮ್ಮೆಂಬಳ ಶಂಕರನಾರಾಯಣ, ವಿದ್ವಾನ್.

॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

ಶ್ರೀಮದ್ಭಾಗವತದೊಳಗಣ

ಯಕ್ಷಗಾನ

# ಯಾದವಾಭ್ಯುದಯ




ಲೇಖಕ:

**ಪೆರಡಾಲ ಕೃಷ್ಣಯ್ಯ**, ವಿದ್ವಾನ್,

ಕನ್ನಡ ಪಂಡಿತ, ಮಹಾಜನ ಸಂಸ್ಕೃತ ಕೋಲೇಜ್,

ಪೆರಡಾಲ, ಕಾಸರಗೋಡು, ದ. ಕ.



ಪ್ರಥಮ ಮುದ್ರಣ.

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1936.

ಬೆಲೆ: 0—5—0.



*(All rights reserved.)*

## ಎರಡು ಮಾತು.

ಧರ್ಮಾರ್ಥಕಾಮಮೋಕ್ಷಗಳಲ್ಲಿ ಧರ್ಮಕ್ಕೆ ಅಗ್ರಸ್ಥಾನವನ್ನಿತ್ತಿರುವ ಈ ಭರತಖಂಡದಲ್ಲಿ ಬಹುಪೂರ್ವಕಾಲದಲ್ಲಿ ಧಾರ್ಮಿಕಶಿಕ್ಷಣವು ಶ್ರುತಿಯ ಅಧ್ಯಯನದ ಮೂಲಕ ಸಾಗುತ್ತಿದ್ದರೂ ಈಚೆಗೆ ಪುರಾಣಗಳು ಆವಿರ್ಭವಿಸಿ ಭಗವಂತನು ಧರ್ಮಸ್ಥಾಪನೆಗಾಗಿ ಅವತರಿಸಿ ಮಾಡಿದ ಅದ್ಭುತಕಾರ್ಯಗಳನ್ನು ಕಥಾರೂಪವಾಗಿ ಮಿತ್ರಸಂಹಿತೆಯಿಂದ ಜನತೆಗೆ ತಿಳಿಸತೊಡಗಿದುವು. ಪುರಾಣಕಥೆಗಳನ್ನು ಮಹಾಕವಿಗಳು ದೃಶ್ಯಕಾವ್ಯಗಳಾಗಿ ಪರಿವರ್ತಿಸಿ ಪಂಡಿತರಂಜನೆಯನ್ನು ಮಾಡುತ್ತಿದ್ದಾಗ ಈಗ್ಗೆ ಸುಮಾರು ಇನ್ನೂರು ವರ್ಷಗಳ ಹಿಂದೆ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಂಡಿತಪಾಮರವರ್ಗಕ್ಕೆ ಅವುಗಳನ್ನೇ ಅಭಿನಯಿಸಿ ಅಥವಾ ಆಡಿತೋರಿಸಲು ಯಕ್ಷಗಾನ ನಾಟಕಗಳು ಅಥವಾ ದಶಾವತಾರದ ಆಟಗಳು ತಲೆ ಎತ್ತಿದುವು.

ಅವುಗಳಲ್ಲಿ ಬಡಗತಿಟ್ಟು ತೆಂಕತಿಟ್ಟುಗಳೆಂಬ ಎರಡು ಒಳಭೇದಗಳಿದ್ದರೂ ಕೇರಳದ ಕಥಕ್ಕಳಿಯನ್ನು ಬಹುಮಟ್ಟಿಗೆ ಹೋಲುತ್ತಿರುವ ತೆಂಕತಿಟ್ಟಿನ ದಶಾವತಾರ ಆಟಗಳೇ ಹೆಚ್ಚಿನವುಗಳೆಂದು ನನ್ನ ಭಾವನೆ. ಕೇರಳದ ಮತ್ತು ಉತ್ತರಕನ್ನಡದ ರೀತಿಗಳಿಗೆ ಮಧ್ಯವರ್ತಿಯಾದ ದಶಾವತಾರ ಆಟದ ಆದ್ಯಪ್ರವರ್ತನೆಯ ಯಶಸ್ಸು ಕೀರ್ತಿಶೇಷ ಕುಂಬಳೆ ಪಾರ್ತಿಸುಬ್ಬಯ್ಯ ಕವಿಗಳಿಗೆ ಸೇರಿದುದೆಂಬುದು ನಿರ್ವಿವಾದವೇ. ಅವರ ಕೃತಿಗಳಾದ ಪುತ್ರಕಾಮೇಷ್ಟಿ ಮೊದಲ್ಗೊಂಡು ಕುಂಭಕರ್ಣ ಕಾಳಗದ ವರೆಗಣ ವಾಲ್ಮೀಕಿರಾಮಾಯಣದ ಯಕ್ಷಗಾನ ಪ್ರಬಂಧಗಳು ಅಥವಾ ಪ್ರಸಂಗಗಳು ಸ್ತ್ರೀಬಾಲರಾದಿಯಾಗಿ ಸರ್ವರಿಗೂ ಸೀತಾರಾಮರ ಧಾರ್ಮಿಕಜೀವನಚರಿತ್ರೆಯನ್ನು ಖಚಿತಪಡಿಸಿದುವು.

ಕವಿ ಪಾರ್ತಿಸುಬ್ಬಯ್ಯನವರ ಕಾಲದಿಂದೀಚೆಗೆ ಅಲ್ಲಲ್ಲಿ ಬೇರೆ ಬೇರೆ ದಶಾವತಾರದ ಮೇಳಗಳು ಹುಟ್ಟಿ, ಪ್ರಸಿದ್ಧ ಯಕ್ಷಗಾನ ಭಾಗ

ವತರೂ ನಟರೂ ಕಾಣಿಸಿಕೊಂಡು ಯಕ್ಷಗಾನ ನಾಟಕಗಳಿಗೆ ಜನತೆಯ ಪ್ರೋತ್ಸಾಹವು ಹೆಚ್ಚಿದುದರಿಂದ ರಾಮಾಯಣದಿಂದ ಮಾತ್ರವಲ್ಲದೆ ಮಹಾಭಾರತ ಶ್ರೀಮದ್ಭಾಗವತಗಳಿಂದಲೂ ಎಷ್ಟೋ ಕಥೆಗಳು ಪಾರ್ತಿ ಸುಬ್ಬಯ್ಯನವರ ಮಾದರಿಯಲ್ಲಿ ಯಕ್ಷಗಾನ ಪ್ರಸಂಗಗಳಾಗಿ ಕವಿಗಳಿಂದ ಬರೆಯಲ್ಪಟ್ಟು ದಶಾವತಾರದ ರಂಗಸ್ಥಳಗಳನ್ನು ಹೊಕ್ಕು ಜನಪ್ರೀತವಾಗಿವೆ. ಇತ್ತೀಚೆಗೆ ಹತ್ತೊಂಭತ್ತನೆಯ ಶತಮಾನದ ಕೊನೆಯಲ್ಲಿ ಪಂಡಿತರೂ ಕವಿಗಳೂ ಆಗಿ ಬಾಳಿದ್ದ ಕೀರ್ತಿಶೇಷ ನಂದಳಿಕೆ ಲಕ್ಷ್ಮೀನಾರಾಯಣಯ್ಯನವರು ಹಿಂದಣ ದಶಾವತಾರದ ಯಕ್ಷಗಾನ ಪದ್ಧತಿಯನ್ನು ಸುಧಾರಿಸಿ ಸ್ಕಾಂದಪುರಾಣ ಬೃಹತ್ಕಥೆಗಳಿಂದಲೂ ಇತಿವೃತ್ತಗಳನ್ನು ಆಯ್ದುಕೊಂಡು ಸಂಗೀತದ ಹೊಸ ಮಟ್ಟುಗಳನ್ನೂ ಸೇರಿಸಿ ಕುಮಾರವಿಜಯ ರತ್ನಾವತೀಕಲ್ಯಾಣಗಳನ್ನು ಬರೆದು ಯಕ್ಷಗಾನವನ್ನು ಮತ್ತಷ್ಟು ಜನಪ್ರೀತವಾಗಿ ಮಾಡಿದರು.

ಪಾಶ್ಚಾತ್ಯ ನಾಗರಿಕತೆಯು ಸರ್ವತ್ರ ವ್ಯಾಪಿಸಿರುವ ಈ ಇಪ್ಪತ್ತನೆಯ ಶತಮಾನದಲ್ಲಿ ಈ ಯಕ್ಷಗಾನ ನಾಟಕಗಳು ಮೊದಲು ಮೊದಲು ಅಲಕ್ಷ್ಯವಾಗಿ ಗಣಿಸಲ್ಪಟ್ಟಿದ್ದರೂ ಮೈಸೂರು ಧಾರವಾಡ ಪ್ರಾಂತ್ಯಗಳಲ್ಲಿ ಬಳಕೆಯಲ್ಲಿರುವ ಕನ್ನಡಿಗರ ಮನೆಮಾತಾದ ಲಾವಣಿ ಮೊದಲಾದ ಕೃತಿಗಳನ್ನು ಕೂಡಾ "ಜನಪದಸಾಹಿತ್ಯ"ವೆಂಬ ಹೆಸರಿಟ್ಟು ಮುಂದೆ ತರಲು ಹವಣಿಸುವ ಆಧುನಿಕ ಸಾಹಿತ್ಯಪ್ರೇಮಿಗಳ ಮುಂದೆ ಲಾವಣಿಗಳಿಗಿಂತ ಹೆಚ್ಚು ವ್ಯಾಕರಣಶುದ್ಧವೂ ಛಂದೋಬದ್ಧವೂ ಆಗಿರುವ ನಮ್ಮ ದಕ್ಷಿಣಕನ್ನಡದ ವಿಶಿಷ್ಟ ಸಾಹಿತ್ಯವಾದ ಯಕ್ಷಗಾನ ಪ್ರಸಂಗಗಳು ಮಾನ್ಯವಾಗದಿರಲಾರವು.

ಇಂಥ ಪರಿಸ್ಥಿತಿಯಲ್ಲಿ ನಾನು ಶ್ರೀಮದ್ಭಾಗವತದಿಂದ ಆರಿಸಿದ ಕಂಸವಧಾನಂತರದ ಕಥಾನಕವನ್ನು **ಯಕ್ಷಗಾನ ಯಾದವಾಭ್ಯುದಯ**ವೆಂಬ ಹೆಸರಿನಿಂದ ಹದಿನೇಳು ವರ್ಷಗಳ ಹಿಂದೆ ನನ್ನ ಅಲ್ಪಮತಿಗೆ ತೋರಿದಂತೆ ಯಕ್ಷಗಾನದ ಹಳೆಯ ಮತ್ತು ಹೊಸಮಟ್ಟುಗಳನ್ನು ಜೊತೆಗೊಳಿಸಿ ಬರೆದಿದ್ದು, ಜನರ ಅನಾದರ ಧನಾಭಾವಗಳ ಭಯ

ದಿಂದ ಪ್ರಕಟಿಸದಿದ್ದರೂ ಈಗ ಸಾಹಿತ್ಯಾಭಿಮಾನಿಗಳು ಯಕ್ಷಗಾನೋಜ್ಜೀವಿನೀ ಸಭೆಗಳ ಮೂಲಕ ತೋರಿಸುವ ಪ್ರೋತ್ಸಾಹದ ಬಲದಿಂದಲೂ ಉಡುಪಿಯ ಶ್ರೀಕೃಷ್ಣಮುದ್ರಣಾಲಯದ ಮಾಲಿಕರಾದ ಶ್ರೀಯುತ ಪಾವಂಜೆ ಗುರುರಾಯರವರ ಕೃಪಾದೃಷ್ಟಿಯಿಂದಲೂ ಸಹೃದಯರ ಮುಂದಿಡಲು ಬಯಸುತ್ತೇನೆ. ಈ ಪ್ರಬಂಧವನ್ನು ಗುಣಗ್ರಾಹಿಗಳಾದ ಸಾಹಿತಿಗಳು ಹಂಸಕ್ಷೀರನ್ಯಾಯದಿಂದ ಸ್ವೀಕರಿಸಬೇಕಾಗಿ ವಿನಂತಿ.

ಮಹಾಜನ ಸಂಸ್ಕೃತ ಕೋಲೇಜ್,
ಪೆರಡಾಲ, ದ. ಕ.
6—5—1936.

ಇತಿ ಸಜ್ಜನವಿಧೇಯ,

**ಪೆರಡಾಲ ಕೃಷ್ಣಯ್ಯ.**

# ಶುದ್ಧಾಶುದ್ಧಪತ್ರಿಕೆ.

| ಪುಟ. | ಪಙ್ಕ್ತಿ. | ಅಶುದ್ಧ. | ಶುದ್ಧ. |
|---|---|---|---|
| 2 | 10 | ಕಮಲಭಿದಜನವಾಸ | ಕಮಲಭಿದಜಿನವಾಸ |
| 3 | 7 | ಭೂಮಿಭಾರತವಧೆಯಂ | ಭೂಮಿಭಾರಕವಧೆಯ |
| 8 | 3 | ಗೊಂದಿಹು | ಗದರಿಂ |
| 9 | 21 | ತರಿವೆನೀಗ। ಸೀಳಿ ನಿನ್ನ ಬಸುರ | ತರಿವೆವೀಗ। ಸೀಳಿ ದೊಡ್ಡ ಬಸಿರ |
| | 22 | ತೋರ್ಪೆನೆನಲು | ತೋರ್ಪೆವೆನಲು |
| 13 | 7 | ಕಾದೆಲರ | ಕಾದಲರ |
| 14 | 19 | ಜಿಷ್ಣು ಮಹಾಭ | ಜಿಷ್ಣು ವಾಹಾಭ |
| | 21 | ಒಂದೆ ಮನದಿ ನಂಬಿಹ | ಒಂದೆ ಮನದಿಂ ನಂಬಿಹ |
| 17 | 5 | ಕನ್ನೈದಿಲೆ | ಕನ್ನೈದಿಲ |
| | 7 | ಮಗನೆಂಬರೆ | ಮಗನೆಂದೆಂಬರೆ |
| 21 | 16 | ತಲ್ಪಿಪ | ಕಲ್ಪಿಪ |
| 23 | 11 | ಮರೆದು | ಮರೆತು |
| 24 | 20 | ತತ್ವವರಿದುಳಿದರು | ತತ್ವವರಿತುಳಿದರು |
| 31 | 12 | ವೃಂದವೆಮ್ಮೊಳಮವು | ವೃಂದ ರಣಕೆಮ್ಮೊಳಮವು |
| 34 | 6 | ಕೇವಲ್ಯ ಖಳರಿಗೆ | ಕೇವಲ ಖಳರಿಂಗೆ |
| | 20 | ರೊಣೆಬಿಲ್ | ಡೊಣೆ ಬಿಲ್ |
| 35 | 25 | ತಿರಲಾಟೆಯೊಳು | ತಿರಲಾಚೆಯೊಳು |
| 40 | 17 | ಹೀನದೊರೆತನರೆಮ್ಮ | ಹೀನದೊರೆತನರೆಮಗೆ |
| 41 | 2 | ತೋರುವೆನು | ತೋರುವೆವು |
| 43 | 23 | ಹರಿ | ಹಲಿ |
| 47 | 14-15 | ಸುತ್ತಿದಡವಿಯೊಲಾಗೆ ವೈರಿಭ ಟೋತ್ತಮರು ಕಾಣುತ್ತಲಾ | ಸುತ್ತಿದಡವಿಯ ತೆರದಿ ರಿಪುಗಳಿಗಿ। ಳಾಯ್ತು ಬಹು ಕೋಲಾಹಲ |
| 48 | 17 | ಯಾತುಧನಾಂಶರ | ಯಾತುಧಾನಾಂಶರ |
| 56 | 19 | ಕೇವಲ್ಯ ಭಕ್ತ | ಏಕಾಂತ ಭಕ್ತ |

ಶ್ರೀಃ



॥ ಶ್ರೀಗೋಪಾಲಕೃಷ್ಣಾಯ ನಮಃ ॥

# ಯಕ್ಷಗಾನ
# ಯಾದವಾಭ್ಯುದಯ

**ಉತ್ಪಲಮಾಲಾವೃತ್ತ.**

ಶ್ರೀವನಿತಾಮುಖಾಂಬುಜಪತಂಗನದಾವನಮೋಘಯೋಗಿಹೃ- ।
ದ್ಭಾವಮಯೂರನೀರದನದಾವನಮರ್ತ್ಯಕದಂಬಪಾಲಕಂ ॥
ಆವನನೇಕಗೋಪಯುವತೀಜನಕೈರವಚಂದ್ರನಾವನಾ ।
ದೇವ ಮುಕುಂದನಾವಗಮೊರಲ್ದಿಮಗೀಗೆ ನಿತಾಂತ ಸೌಖ್ಯಮಂ ॥ ೧ ॥

**ರಾಗ ನಾಟಿ, ರೂಪಕತಾಳ.**

ಜಯ ಶಿವತನಯ ಗಜಾನನ । ಜಯ ಪಾವನ ಫಣಿಭೂಷಣ । ಜಯ ಜಂಬೂಫಲಭಕ್ಷಣ । ಜಯ ಸುರನುತ ಚರಣ ॥ ಜಯ ॥ ಪಲ್ಲ ॥ ನಡುವಿಗೆ ಬಲಿದಹಿ ಶೇಷಗೆ । ಪಡಿಯೆನೆ ಸುರಿವ ಮದಾಂಬುಗೆ । ಎಡೆವಿಡದೆರಗುವ ತುಂಬಿಯು । ಪಡೆ ಪೋಲ್ತಿರೆ ಮುಗಿಲ ॥ ನಡೆವಿನ ಶಶಿಗಳ ವೈಸಿರಿ । ಗುಡೆ ಮಕುಟವು ಮೇಣ್ ನಿಗ್ಗವ । ಜಡಧಿಯ ಮಥಿಸಿದ ಮಂದರ । ಕೆಣೆಯುಹ ಗಣಪಾಲಾ ॥ ಜಯ ॥ ೧ ॥ ದುರ್ಗಾ ಹೃದಯೋತ್ಸವಕರ । ನಿರ್ಗತ ಭವಬಂಧನ ಖಳ । ವರ್ಗಾಹಿತ

ಶರಣೆಂಬೆನು । ಭಾರ್ಗವಗುರು ಗುಣಧೀ ॥ ದುರ್ಗತಿಕಶರಣ್ಯನೆ ಸ । ದ್ವರ್ಗದ ಕೆಳೆ ಕೊಡು ಕೃತಿಗಹ । ದುರ್ಘಟಣೆಗಳಂ ತೊಲಗಿಸೆ । ಡರ್ಗೇಡಿಯೆ ದಯದಿ ॥ ಜಯ ॥ ೨ ॥ ದಿವ್ಯಾಷ್ಟೈಶ್ವರ್ಯಂಗಳ । ನವ್ಯಾಹತವೀವನೆ ಸ । ದ್ರವ್ಯಾಷ್ಟಕಯುತವಪ್ಪಾ । ಹವ್ಯವ ನಿನಗೀವೆ॥ ಕಾವ್ಯಂ ಬುಧಸಮಿತಿಗೆ ಸು । ಶ್ರಾವ್ಯಮಿದಪ್ಪಂತೆಸಗೊ । ಲ್ದವ್ಯಯ ಮನವಾಡ್ಕೈ ಕ । ರ್ತವ್ಯವ ನಾ ಗೈದೆ ॥ ಜಯ ॥ ೩ ॥

ವಾರ್ಧಿಕ್ಯ.

ಕಮಲಲೋಚನಮಿತ್ರ ಕಮಲನಿರ್ಮಲಗಾತ್ರ । ಕಮಲವನ ರಿಪುಚೂಡ ಕಮಲಾನುಜವಿಭಾಡ । ಕಮಲಭವನುತ ಗೌರಿಕಮಲ ಮುಖತಿಮಿರಾರಿ ಕಮಲಸಾಯಕವಿದಾರಿ ॥ ಕಮಲಭಿದಜಿನವಾಸ ಕಮಲಾಪ್ತಶತಭಾಸ । ಕಮಲಾಕ್ಷ ಕೀನಾಶ ಕಮಲಬಂಧುಜನಾಶ । ಕಮಲನಾಮಸುಕೇಶ ಜಗದೀಶ ಉದನೇಶ ಶರಣು ಸಲಹೆನ್ನ ನನಿಶ ॥ ೧ ॥

ಭಾಮಿನಿ.

ರಾಜಸದಿ ವಾಗ್ದೇವಿಯಾಗಿ ಸ । ರೋಜಸದ್ಮನ ಮುಖವ ಸೇರಿ ಮಿ । ರಾಜಿಸುವೆ ಸಾತ್ವಿಕದಿ ವಿಷ್ಣುವಿನೆದೆಯ ಮನೆಗೈದೆ॥ ರಾಜಚೂಡನ ದೇಹದರ್ಧವ । ನೋಜೆಯಿಂ ತಾಮಸದೊಳಿಳಿದಾ । ಮೂಜಗವ ಪಡೆದಂಬೆ ಪಾಲಿಪುದೆನ್ನ ಮೂಕಾಂಬೆ ॥ ೧ ॥

ಕಂದಪದ್ಯ.

ಮಿಗೆ ವಾಲ್ಮೀಕಿಯ ಕೃತಿಯಂ । ನೆಗಳ್ತೆವಡೆದಿರ್ಪ ರಾಮ ಚರಿತಾಮೃತಮಂ ॥ ಬಗೆವುಗೆ ಕನ್ನಡಿಸಿದ ಯ । ಕ್ಷಗಾನ ವಾಲ್ಮೀಕಿ ಪಾರ್ತಿಸುಬ್ಬಗೆ ಮಣಿವೆಂ ॥ ೧ ॥

ವಾರ್ಧಿಕ್ಯ.

ತಾರಕಾಸುರರಿಪು ಸಮೀರಜ ಪರಶುರಾಮ । ನಾರದ ವ್ಯಾಸ ಶುಕ ಸೂರಿ ವಲ್ಮಿಕಜಾದಿ । ಕಾರಣಿಕ ಪುರುಷಪದವಾರಿಜಕೆ ಮಣಿದು

ಬೃಂದಾರಕರ ಪೊಗಳಿ ಬಳಿಕ ॥ ಧಾರುಣಿಯು ಕವಿತಿಲಕವಾರಮುಂ ಕುಂಬಿಟ್ಟು । ನಾರಾಯಣನ ಕಥೆಯುನೀ ರಸೆಗೆ ತಿಳಿಸುವೆಂ । ನೀರ ನಿಳಿಕೈದು ಪಾಲ್ಪೀರುವಂಚೆಗಳಂತೆ ಸಾರವುರಿವುದು ಸುಜನರು ॥ ೧ ॥

### ಕಂದಪದ್ಯ.

ಹೆತ್ತವರಂಘ್ರಿಗೆ ಮಣಿದವ । ರಿತ್ತಾಶೀರ್ವಾದದ ಬಲದಿಂ ಗುರು ಪದವುಂ ॥ ಚಿತ್ತದಿ ಜಾನಿಸಿ ಪೇಳುವೆ । ನುತ್ತಮ ಹರಿಕಥೆಯ ಭೂಮಿ ಭಾರತವಥೆಯುಂ ॥ ೧ ॥

### ದ್ವಿಪದಿ.

ಇಂತಿಷ್ಟದೇವತಾ ಪ್ರಾರ್ಥನೆಯ ಗೈದು । ಮುಂತಹ ಕಥಾ ಸಂಗ್ರಹವನೊರವೆನಿಂದು ॥ ೧ ॥ ಭಾಗವತಪೌರಾಣದೊಳು ಕಂಸ ವಥೆಯು । ನಾಗಶಯನನು ಗೈದು ಮಧುರೆಗಧಿಪತಿಯು ॥ ೨ ॥ ಯದು ವೃದ್ಧನಂ ಗೈದ ಬಳಿಕ ಗೋವಿಂದ । ಮುದದೊಳಾಡಿದ ಲೀಲೆಯುಹುದೀ ಪ್ರಬಂಧ ॥ ೩ ॥ ನರನಾಟಕರ್ಗೆ ವಸುದೇವನುಪನಯನ । ವಿರಚಿಸಲು ಗುರುಕುಲಕೆ ನಡೆದು ಗುರುವಚನ ॥ ೪ ॥ ಪಾಲಿಸುತ ಗೋಕುಲದ ಜನರನುದ್ಧವನ । ಮೂಲಕದಿ ಸಂತೈಸಿ ಕಮಲದಳನಯನ ॥ ೫ ॥ ಶರಣವತ್ಸಲನೆನಿಸಲತ್ತ ಮಾಗಧನು । ತೆರಳಿಬರೆ ಸದೆಬಡಿದು ಸೆಳೆದು ದ್ರವ್ಯವನು ॥ ೬ ॥ ಲಕ್ಷ್ಮೀಶ ಬಾಣಸೈನ್ಯವ ತರಿದ ಕಥೆಯು । ಯಕ್ಷ ಗಾನದಿ ಪೇಳ್ವೆನಿದು ಪುಣ್ಯನಿಚಯು ॥ ೭ ॥ ರಾಗ ಯತಿ ತಾಳ ರಸ ಭಾವ ಮೊದಲಾದ । ಯೋಗಗಳನರಿಯೆ ತಿದ್ದುವುದು ಬುಧವೃಂದ ॥ ೮ ॥

### ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಶ್ರೀಮದಮೃತಗಭಸ್ತಿವಂಶ । ವ್ಯೋಮದಿನಕರನಹ ಪರೀಕ್ಷಿತ । ಭೂಮಿಪಾಲಗೆ ಶುಕಮುನೀಂದ್ರನು । ಪ್ರೇಮದಿಂದ ॥ ೧ ॥ ಪೇಳುತಿರೆ ಭಾಗವತ ಕಥನವ । ಕೇಳಿದನು ನೃಪನೊಂದಿವಸ ಗೋ । ಪಾಲ ಗೋಕುಲದಿಂದ ಗಾಂದಿನಿ । ಬಾಲನೊಡನೆ ॥ ೨ ॥ ಮಧುರೆಗೈತಂದಲ್ಲಿ ಕಂಸನ । ವಧಿಸಿ ತಂದೆಯು ಬಂಧನವ ಕಳೆ । ಚಿದ ಬಳಿಕಲೇಂಗೈದ

ನೆಂಬುದ । ಮುದದೊಳೆನಗೆ ॥ ೩ ॥ ಬಿತ್ತರಿಪುದೆಂದೆರಗೆ ಯಮಿಗೆ ಭೂ । ಪೋತ್ತಮನ ಪಿಡಿದೆತ್ತಿ ಹರಿಯಸು । ಚಿತ್ರದಲಿ ನೆಲೆಗೈದು ಸಂತಸ । ವೆತ್ತು ನುಡಿದ ॥ ೪ ॥

ರಾಗ ಭೈರವಿ, ಝಂಪೆತಾಳ.

ಕುರುವಂಶವಾರ್ಧಿಹಿಮ । ಕರ ಪರೀಕ್ಷಿತ ಕೇಳು । ನರನಾಟಕದಿ ವಿಷ್ಣು । ಮೆರೆದ ಸತ್ಕಥೆಯ ॥ ೧ ॥ ಅಖಿಳಲೋಕೈಕನಾ । ಯಕನ ನಾಮಸ್ಮರಣೆ । ಪ್ರಕಟದಿಂ ಮೋಕ್ಷದಾ । ಯಕವಪ್ಪುದೈಸೆ ॥ ೨ ॥ ವಸುಧೆ ಮೊರೆಯಿಡೆ ದಯದೊ । ಳಸುರವಧೆಗುಜ್ಜುಗಿಸಿ । ವಸುದೇವ ಗೊಗೆದು ವ । ರ್ಧಿಸುತ ಗೋಕುಲದಿ ॥ ೩ ॥ ಆ ಪರಮಪೂರುಷನು । ಗೋಪಗೋಪೀಜನರಿ । ಗೋಪನೆಂದೆನಿಸಿ ಚಿ । ದ್ರೂಪನೆಸೆದಿರಲು ॥ ೪ ॥

ವಾರ್ಧಿಕ್ಯ.

ಸುರಮುನಿಪನಿಂದರಿತು ಕಂಸಾಸುರಂ ವೈರಿ । ಹರಣವುಂಗೆಯ್ಯೆ ಪೂತನಿ ಶಕಟ ಮುಖ್ಯ ದನು । ಜರನಟ್ಟೆ ಬಾಲಕೇಳಿಯೊಳವರ ಸಂಹರಿಸಿ ಜವಳಿ ಮತ್ತಿಗಳ ಕಿತ್ತು ॥ ಹರಿ ಬಲರು ಮುದದೊಳಿರೆ ಬಿಲ್ಲಹಬ್ಬದ ನೆವದಿ । ಕರೆಯಲಕ್ರೂರನನ್ನಟ್ಟಲವನೊಡನೆ ನಡೆ । ತರುತ ರಜಕನ ಕೊಂದು ಕುಬ್ಜೆಯಂಗವ ತಿದ್ದಿ ಶರಣರಿಂಗಭಯ ವಿತ್ತು ॥ ೧ ॥

ಭಾಮಿನಿ.

ಆನೆಯನು ಮುರಿದೊತ್ತಿ ಮಲ್ಲರ । ದಾನವಾಂತಕರಿದು ಕಂಸನ । ಪ್ರಾಣವನು ಜವಗಿತ್ತು ತಾಯ್ತಂದೆಯರ ಸೆರೆ ಬಿಡಿಸಿ । ಮಾಣದುರೆ ಸಂತೈಸಿ ಯಾದವ । ಸೇನೆಯನು ಬಳಿಕುಗ್ರಸೇನಗೆ । ಕ್ಷೋಣಿಯೊಡೆತನವಿತ್ತರಚ್ಯುತ ಬಲರು ಮಥುರೆಯೊಳು ॥ ೧ ॥

ರಾಗ ಮಧ್ಯಮಾವತಿ, ತ್ರಿವುಡೆತಾಳ.

ಭರತಕುಲಮಣಿ ಕೇಳು ಯದುಭೂ । ವರನು ಕಾಯ್ವಾ ಕಟ್ಟಳೆಯ ಶ್ರೀ । ವರನು ಸಡಲಿಸಲುಗ್ರಸೇನನು । ತಿರುಗಿ ಮಥುರೆಯ

ಪಟ್ಟವಾ । ಧರಿಸಿ ಮುದದಿ ॥ ೧ ॥ ಒಂದು ದಿನ ವಸುದೇವನೊಡನೆ ಮು । ಕುಂದನನು ಹೊಗಳುತ್ತ ನುಡಿದನು । ಸಂದ ಮಲ್ಲರ ಕೆಡಹಿ ಕಂಸನ । ಕೊಂದನಮಮಾ ಕೃಷ್ಣನ । ಸತ್ತ್ವವೆಂತೊ ॥ ೨ ॥ ಧರೆಯು ಬಾಲಕರಲ್ಲ ಬಲ ಕೃ । ಷ್ಣರು ಕಣಾ ಕಾರಣಿಕ ಪುರುಷರು । ದುರುಳ ತನದಿಂ ಮಡಿದನಕಟಾ । ಹರಿವಿರೋಧವ ಸಾಧಿಸಿ । ತರಳ ಕಂಸ ॥ ॥ ೩ ॥ ಮೇದಿನಿಯೊಳಿವರಣುಗರಪ್ಪಡೆ । ಗೈದ ಪುಣ್ಯವೆ ಭಾಪು ನಿನ್ನದಿ । ದಾದರಿನ್ನುಪನಯನಗೈವುದು । ಯಾದವಾನ್ವಯಪದ್ಧತಿ । ತಪ್ಪದಂತೆ ॥ ೪ ॥

ರಾಗ ಸಾಂಗತ್ಯ, ರೂಪಕತಾಳ.

ಎಂದುಗ್ರಸೇನನ ನುಡಿಗುಬ್ಬಿಯಾನಕ । ದುಂದುಭಿ ಗಾರ್ಗ್ಯರ ಮತದಿ ॥ ಬಂಧುಗಳೊಡನೆ ಸುಲಗ್ನವ ಹುಡುಕಿ ಗೋ । ವಿಂದ ರಾಮರಿಗೆ ಸಂತಸದಿ ॥ ೧ ॥ ಕುಲಧರ್ಮದಂತೆ ಚೌಳಂ ಗೈದು ಮಂಗಳ । ಕಲಶೋದಕದಿ ಸ್ನಾನಗೈಸಿ ॥ ಚೆಲುವ ಮೂರ್ತಿಗಳ ಸುಭಕ್ಷ್ಯಭೋಜ್ಯಗಳಿಂದ । ನಲವಾಂತು ದೇವಕಿಯುಣಿಸಿ ॥ ೨ ॥ ಪಟ್ಟಾವಳಿಯ ಮುಸುಕಿಟ್ಟು ಮೆಟ್ಟಕ್ಕಿಯ । ಮೆಟ್ಟಿಸಿಯುಪವೀತ ತೊಡಿಸಿ ॥ ಹೃಷ್ಟಮಾನಸನಾಗಿ ಬ್ರಹ್ಮೋಪದೇಶವ । ಕೊಟ್ಟನು ವಸುದೇವನಾಗ ॥ ೩ ॥ ಸೆರೆಮನೆಯೊಳು ಮುನ್ನ ಜನಿಸಿದ ಶಿಶುವನು । ಪೊರೆವುಪಾಯವ ಮಾಡುವಾಗ ॥ ನೆರೆ ಸಂಕಲ್ಪಿಸಿದಂತೆ ಲಕ್ಷ ಗೋವು ಗಳನು । ವರವಿಧಿಯಂತೆ ಸಿಂಗರಿಸಿ ॥ ೪ ॥ ಸಾಂಗವೇದಜ್ಞ ವಿಪ್ರರಿಗಿತ್ತು ಬಹು ಧನ । ವಂಗಹೀನರಿಗೆ ತಾ ಕೊಡಲು ॥ ರಂಗ ರಾಮರಿಗೆ ಭಿಕ್ಷೆಯನಿಡೆ ದೇವಕಿ । ಯಂಗನಾನಿವಹ ಪಾಡಿದುದು ॥ ೫ ॥

ರಾಗ ಬೇಗಡೆ, ಅಷ್ಟತಾಳ.

ಭಿಕ್ಷೆಯ ನೀಡೆ ಸಖಿ । ಸಾರಸಮುಖಿ । ಭಿಕ್ಷೆಯ ನೀಡೆ ಸಖಿ ॥ ಇಕ್ಷುಚಾಪನ ಪಿತ । ಪಕ್ಷಿವಾಹನ ಪರ । ಪಕ್ಷರಹಿತ ನಿತ್ಯ । ಲಕ್ಷ್ಮೀ ಕಾಂತಗೆ ಬಂದು ॥ ಭಿಕ್ಷೆಯ ॥ ೧ ॥ ಇಳೆಯು ದೂರಲು ದಯದಿ ।

ದೇವಕಿಗರ್ಭ । ದೊಳು ಬಂದು ಗೋಕುಲದಿ ॥ ಬೆಳೆದು ಯಶೋದೆಗೆ । ನಲವಿತ್ತು ಪಾಲ್ಬೆಣ್ಣೆ । ಮೆಲುತ ಗೋವ್ಗಳ ಕಾಯ್ದು । ಚೆಲುವ ರಂಗಯ್ಯಗೆ ॥ ಭಿಕ್ಷೆಯ ॥ ೨ ॥ ಚರಣಘಾತದಿ ಶಕಟಾ । ಖಳನನಿಕ್ಕಿ । ಮರಣ ಪೂತನಿಗೆ ಕೊಟ್ಟಾ ॥ ಗಿರಿಯನು ಕೊಡೆಗೈದ । ಧುರಧೀರ ಮಲ್ಲರ । ತರಿದ ಕಂಸಾಂತಕ । ಹರಿಗೆ ಸೀ ಹಿಡಿಯಕ್ಕಿ ॥ ಭಿಕ್ಷೆಯ ॥ ೩ ॥ ಜಗಕೆ ದುರ್ಮದ ದೈತ್ಯರ । ಭಾರವು ಹೆಚ್ಚೆ । ಹಗುರವಾಡಲು ಸುರರ ॥ ತಗಹಿನಿಂದವತಾರ । ಹೊಗುವ ನಿತ್ಯಾತುಮ । ನಿಗಮ ವೇದ್ಯಗೆ ಭಕ್ತಿ । ಮಿಗೆ ವಸ್ತ್ರಾಭರಣವ ॥ ಭಿಕ್ಷೆಯ ॥ ೪ ॥

ವಾರ್ಧಿಕ್ಯ.

ಆದುದಿಂತತಿ ವಿಭವದಿಂದುಪನಯನಕರ್ಮ । ವೇದೋಕ್ತದಿಂ ಬಳಿಕ ವಸುದೇವನವದಿರಂ । ಭೂದಿವಿಜ ಸಾಂದಿಪನ ಬಳಿಗೆ ವಿದ್ಯಾಭ್ಯಾಸಕೆಂದೆನುತ ಕಳುಹಲವರು ॥ ಮೇದಿನಿಯ ನರರಿಂಗೆ ಗುರುಮುಖಂ ಹೊರತಾಗಿ । ತಾ ದೊರೆಯದಾತ್ಮವಿಜ್ಞಾನವೆಂದರಿಪುವಂ । ತಾದಿಮೂರ್ತಿಗಳಖಿಳ ವಿದ್ಯಾನಿಧಿಗಳೋಜನೆಡೆಗೈದಿದರ್ಕಾಶಿಗೆ ॥ ೧ ॥

ರಾಗ ಸುರುಟಿ, ಏಕತಾಳ.

ಲಾಲಿಸು ಭೂಕಾಂತಾ । ಗುಣಯುತ । ಪೇಳುವ ಹರಿಚರಿತ ॥ ನೀಲಾಂಬರ ಗೋ । ಪಾಲರು ಗುರುವರ । ನಾಲಯಕೈದಿದ । ಮೇಲಾನಂದದಿ ॥ ಲಾಲಿಸು ॥ ೧ ॥ ಓದಿದರಾಚಾರ್ಯ । ಕಲಿಸಲು । ಮೋದದಿಂದ ಶ್ರುತಿಯ ॥ ಸಾಧಿಸಿದರು ಶಿ ; ಕ್ಷಾದ್ಯಂಗಗಳೆನು । ಹಾದಿಯರಿತರಾ । ತೋದ್ಯ ಸಂಗೀತದ ॥ ಲಾಲಿಸು ॥ ೨ ॥ ಗರಡಿಯ ಸಾಧಕವ । ಖಡ್ಗದ । ಹರಿಗೆಯ ಸಂಗರವ ॥ ಶರಚಾಪಂಗಳ । ಕರ ಕೌಶಲ್ಯವ । ಪರುಠವಣೆಗೆ ಬಹ । ಹೊರಿಗೆಯನೆಲ್ಲವ ॥ ಲಾಲಿಸು ॥ ೩ ॥

ರಾಗ ಕೇತಾರಗೌಳ, ಅಷ್ಟತಾಳ.

ಪರಮಪೂರುಷರಿಂತು । ಹರುಷದಿ ಚೌಷಷ್ಟಿ । ಪರಿಗಣನೆಯ ವಿದ್ಯೆಯ ॥ ಅರವತ್ತನಾಲ್ದಿನ । ಹರಿವಷ್ಟರೊಳು ಕಲ್ತು । ಸರುವಜ್ಞ

ರಾದುದನು ॥ ೧ ॥ ಆ ಗುರುವೀಕ್ಷಿಸಿ । ಮೂಗಿನೊಳ್ಬೆರಳಿಟ್ಟು । ತೂಗಿ ತಲೆಯನಿವರು ॥ ಯೋಗಸಿದ್ಧರು ಹೊರತಾಗಲ್ಲ ನರರೆಂದು । ಬೀಗಿದ ತೋಷದೊಳು ॥ ೨ ॥ ಎತ್ತಲೀ ಶಿಶುಗಳು । ಹೊತ್ತುಹೊತ್ತಿನೊಳರ । ವತ್ತನಾಲ್ಕೂ ವಿದ್ಯವ ॥ ಗೊತ್ತುಗೈದಿವರ ಸು । ಚಿತ್ತಶುದ್ಧಿಯದೆಂತೆ । ನುತ್ತ ಧನ್ಯತೆವಡೆದ ॥ ೩ ॥

ಭಾಮಿನಿ.

ಭೂಪ ಕೇಳಚ್ಚರಿವಡೆಯೆ ಗುರು । ವಾ ಪದುಮದೃಶ ರಾಮರಖಿಳ ಕ । ಲಾಪರಮ ಕೌಶಲ್ಯಪೂರಿತರಾಗಿ ಸಂತಸದಿ ॥ ಚಾಪವಿದ್ಯಾನಿಪುಣ ರೋಜನ । ತಾಪಪರಿಹಾರಕ್ಕೆಳಸಿ ಸಾಂ । ದೀಪನಂಘ್ರಿಗೆ ಮಣಿದು ಪೇಳ್ದರು ಮಧುರವಚನದಲಿ ॥ ೧ ॥

ರಾಗ ಕಾಂಬೋಧಿ, ಅಷ್ಟತಾಳ.

ಗುರುರಾಯ ಕೇಳಿಮ್ಮ ಮಾತ । ದಯ । ವಿರಿಸಿ ಬಾಲಕರೊಳು ಖ್ಯಾತ ॥ ಗುರುರಾಯ ॥ ಪಲ್ಲ ॥ ಕಲಿತುಕೊಂಡೆವು ನಿಮ್ಮ ದಯದಿ । ಸರ್ವ । ಕಲೆಗಳ ಚೌಷಷ್ಟಿ ದಿನದಿ ॥ ಸಲೆ ಸೌಖ್ಯಸಂಪದ । ಗಳು ನಮಗಪ್ಪಂತೆ । ಒಲಿದು ದಕ್ಷಿಣೆ । ಗಳನು ಪರಿಗ್ರಹಿ । ಸಲಘು ಮಹಿಮನೆ । ಕಳುಹು ನಮ್ಮನು ॥ ಗುರುರಾಯ ॥ ೧ ॥ ಮನಸಿಗಂಟಿದ ಚಿಂತೆಯುಳಿದು । ಸೇವೆ । ಯನು ನಮ್ಮ ಶಕ್ತಿಯ ತಿಳಿದು ॥ ಅನಘ ಮುದದಿ ಬೆಸ । ಸೆನಲು ಭಕ್ತಿಯ ಮನ । ದಣಿಯೆ ಹೊಗಳುತ । ವನಿತೆ ಗೆಂದಡೆ । ಘನ ಪತಿವ್ರತೆ । ಯಿನೆಯುಗೆಂದಳು ॥ ಗುರುರಾಯ ॥ ೨ ॥

ಭಾಮಿನಿ.

ಪ್ರಾಣವಲ್ಲಭ ಕೇಳು ತ್ರಿಜಗ । ತ್ರಾಣಮೂರ್ತಿಗಳಲ್ಲದಿವರಿ । ಮಾನವರು ತಾವಾಗಲೊಲ್ಲರು ಬದ್ಧವದರಿಂದ ॥ ಕಾಣಿಕೆಗೆ ತೀರ್ಥದೊಳಳಿದ ಮ । ತ್ಸೂನುವನು ತರಲಾಜ್ಞೆಯಿತ್ತರೆ । ಕಾಣಿಸುವ ದುತ್ಸವವು ನಮಗೆನಲೆಂದ ಶಿಷ್ಯರಿಗೆ ॥ ೧ ॥

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಮೆಚ್ಚಿದೆನು ಬಾಲಕರೆ ನಿಮ್ಮಯ । ನಿಚ್ಚಟದ ಗುರುಭಕ್ತಿ ಗೊಂಡಿಹು । ದುಚ್ಚರಿಪೆ ಮತ್ತರುಣಿಯುಳ ಮನ । ದಿಚ್ಛೆಯೊಂದ ॥ ೧ ॥ ಅಪ್ರತಿಮರಿರ ಕೇಳಿ ಪೂರ್ವದೊ । ಳಾ ಪ್ರಭಾಸದಿ ವರುಣನಿಂದ ಮ । ನಃಪ್ರಿಯಾತ್ಮಜನಳಿದನಾತನ । ಕ್ಷಿಪ್ರದಿಂದ ॥ ೨ ॥ ಪಡೆದು ತಂದರೆ ನಮಗೆ ಮುದವ । ಪ್ಪುದು ನಿಮಗೆ ಸತ್ಕೀರ್ತಿಯೆಂದೆನೆ । ಪದಕೆರಗಿ ಗುರುವರನ ಬೀಳ್ಕೊಂ । ಡಧಟರಾಗ ॥ ೩ ॥ ಮಣಿರಥವನೇರುತ ಪ್ರಭಾಸಾ । ವನಿಗೆ ನಡೆದಬ್ಜಾಕ್ಷ ರಾಮರು । ಘನ ವಿಲಾಸದಿ ಕುಳಿತು ಕಂಡರು । ವನಧಿತಟದಿ ॥ ೪ ॥

ವಾರ್ಧಿಕ್ಯ.

ಹರುಷದಿಂ ಚರಿಪ ಜಲಚರಗಳಿಂ ಭರಗಳಿಂ । ಉರಗ ಕರ್ಕಟ ಕೂರ್ಮ ಕರಿಗಳಿಂ ಗಿರಿಗಳಿಂ । ನೆರೆ ರಭಸದಿಂ ಕುದಿವ ವಡವನಿಂ ಮಡುವಿನಿಂ ನೀಳ್ದ ಚೆಂಗುಡಿಗಳಿಂದ ॥ ಧರಣಿಯುಂ ಬಳಸಿರ್ಪ ಪೆಂಪಿನಿಂ ಗುಂಪಿನಿಂ । ತರತರದ ರತ್ನಗಳ ಗನಿಗಳಿಂ ಧ್ವನಿಗಳಿಂ । ಶರಗುಡಿವ ಮೇಘಗಳ ಸಂಗದಿಂ ಭಂಗದಿಂದೆಸೆವಂಬುಧಿಯ ಸೊಬಗನು ॥ ೧ ॥

ಭಾಮಿನಿ.

ವಿಧುಕುಲಾಧಿಪ ಕೇಳು ಸಾಗರ । ನಿವನರಿತು ನವರತ್ನ ಕಾಣ್ಕೆಯೊ । ಳಿದಿರುವಂದರ್ಚಿಸುತ ಜಯಜಯತೆಂದು ವಂದಿಸಲು ॥ ಮಧುಮಥನನಿಂತೆಂದ ನಿನ್ನೊಳ । ಳಿವ ಗುರುವಿನಾತ್ಮಜನ ನೀ ತೋ । ರ್ಪುದು ಬಳಿಕಲುಪಚಾರವೆನಲಿಂತೆಂದನಬ್ಧಿಪತಿ ॥ ೧ ॥

ರಾಗ ತೋಡಿ, ಅಷ್ಟತಾಳ.

ಸ್ವಾಮಿ ಲಾಲಿಪುದೆನ್ನ ಮಾತ । ಭಕ್ತ । ಕಾಮಿತವೀವ ಶ್ರೀನಾಥ ॥ ಸ್ವಾಮಿ ಲಾಲಿಪುದೆನ್ನ ॥ ಪಲ್ಲ ॥ ಕೊಲ್ಲೆನು ಗುರುತನೂಭವನ । ಮೇಣು ಕೊಲ್ಲುವಾತಂಗೆಡೆಗುಡೆ ನಾ ॥ ಇಲ್ಲ ಸಂಶಯವೆನ್ನೊ । ಳುಳ್ಳ

ಪಂಚಜನಾಖ್ಯ । ಖುಲ್ಲ ಶಂಖಾಸುರ । ನೆಲ್ಲಾ ಕೃತ್ಯಕೆ ಮೂಲ ॥ ಸ್ವಾಮಿ ॥ ೧ ॥ ಭೂಸುರನಾಗಿ ಬಂದೆನ್ನ । ಬೇಡಿ । ಮೋಸದಿಂದಿರ್ಪ ದಾನವನ ॥ ನಾಶಗೈದಿಳೆಗೆ ನೀ । ಲೇಸ ಪಾಲಿಸು ಮಿಕ್ಕ । ವಾಸವಾದಿಗಳು ಶಂ । ಖಾಸುರಗೆಣೆಯಲ್ಲ ॥ ಸ್ವಾಮಿ ॥ ೨ ॥

ಭಾಮಿನಿ.

ವರುಣನಿಂತೆನೆ ಹರಿ ನುಡಿದನಾ । ದುರುಳನಿರವನು ತೋರಿಸೀಕ್ಷಣ । ಪರಿಕಿಸುವೆನೆನೆ ಸನ್ನೆಯಲಿ ತೋರಿಸಲು ಸಿಂಧುಪತಿ ॥ ಮರಣರಹಿತರು ಶರಧಿಗಿಳಿದೈ । ತರಲು ಕಾಣುತ ಕೆರಳಿ ಶಂಖನೆ । ಸುರನು ಘುಡುಘುಡಿಸುತ್ತಲಡಹಾಯ್ದೆಂದನವರೊಡನೆ ॥ ೧ ॥

ರಾಗ ಶಂಕರಾಭರಣ, ಮಟ್ಟೆತಾಳ.

ಆರೆಲೋ ಮದಾಂಧರಾಗಿ । ವಾರಿಧಿಯೊಳು ಮುಳುಗುತಿದ್ದು । ಚೋರನಿಂತು ಹುಡುಕುವಿರಿ ಮೊ । ಗೇರರಂದದಿ ॥ ಚಾರು ಸುಂದರಾಂಗರಹಿರಿ । ನೀರಿನೊಳಗೆ ಕೆಲಸವೇನು । ಘೋರನೈವದಿರಲು ಮಾಳ್ಪೆ । ಪಾರಣೆಯನ್ನು ॥ ೧ ॥ ಕಳ್ಳನಂತೆ ಕಡಲ ಮಧ್ಯ । ದಲ್ಲಿ ಮನೆಯ ಮಾಡಿಕೊಂಡು । ಮೆಲ್ಲನಬ್ಧಿಗಿಳಿವ ಜನರ । ಕೊಲ್ಲುತ್ತಧಮ ॥ ಡೊಳ್ಳ ಬೆಳೆಸುತಾ ಪ್ರಭಾಸ । ದಲ್ಲಿ ಸೆಳೆದ ಸಾಂದಿಪಜನ । ನಿಲ್ಲದೀಗ ತೋರು ತೋರು । ಖುಲ್ಲ ದಾನವ ॥ ೨ ॥ ಇಷ್ಟು ಕೆಲಸಕಿಲ್ಲಿ ಬಂದು । ಕೆಟ್ಟುಪೋದಿರಕಟ ನಿಮ್ಮ । ಶಿಷ್ಟನಂದೇ ಸಂದನೆನ್ನ । ಹೊಟ್ಟೆಹಸಿವಿಗೆ ॥ ಕಷ್ಟ ನಿಮ್ಮ ಪೂರ್ವಕರ್ಮ । ವಟ್ಟಿಕೊಂಡು ಬಂದುದಿಲ್ಲಿ । ಗಷ್ಟಮೂರ್ತಿ ದಯದೊಳೆನಗೆ । ಕೊಟ್ಟ ಹಿಟ್ಟನು ॥ ೩ ॥ ಖೂಳ ಹೆಚ್ಚು ಗಳಹೆ ನಿನ್ನ । ನಾಲಿಗೆಯನು ತರಿವೆನೀಗ । ಸೀಳಿ ನಿನ್ನ ಬಸುರನಳಿದ । ಬಾಲಗುರುಜನ ॥ ಮೇಲೆ ತೆಗೆದು ತೋರ್ಪೆವೆನಲು । ತಾಳಿ ಕಿನಿಸ ತೆರೆದು ಬಾಯ । ಬೀಳ ಬರಲು ಖಳನ ತಿವಿದ । ತಾಳಕೇತನು ॥ ೪ ॥

ರಾಗ ಭೈರವಿ, ಏಕತಾಳ.

ಬಲಸ ಹತಿಗೆ ನೊಂದೆಂದ । ನರ । ಕುಲ ಮೋಹ್ ಸುಮನಸವೃಂದ ॥ ಸಲೆ ಕೇಳಲು ಮುನ್ನಾಮ । ಭಯ । ದೊಳು ಮೈಗರೆದಪ

ರಮವು ॥ ೧ ॥ ಪುಸಿಯೊದರುವೆಯ ಮದಾಂಧ । ನಿಲೆ । ದೆಸೆಯಿಲ್ಲದೆ ಕ್ರವ್ಯಾದ ॥ ಎಸೆವ ನೃಪರ ಭಯದಿಂದೆ । ನೀ । ವಸುಧೆಯ ಬಿಟ್ಟ್ಟ ತಂದೆ ॥ ೨ ॥ ಏನೆಂದೆಯೊ ಹುಲುಗುವರ । ಕುರಿ । ಯಾನೆಗೆ ಸರಿಯೆ ವಿಚಾರ ॥ ಮಾಣಿನ್ನೆಲೆಯೆಲೆ ಮರುಳೆ । ತವ । ಪ್ರಾಣವ ಕಳೆವೆ ನಿಮಿಷದೊಳೆ ॥ ೩ ॥ ಎಂದೆನುತಲೆ ಮುಷ್ಟಿಯೊಳು । ಖಳ । ಬಂದರೆ ಹರಿಯನೆರಗಲು ॥ ಮಂದರಧರ ಪಾದದೊಳು । ಜೀ । ಳಿಂದೊದೆಯಲು ಖಾತಿಯೊಳು ॥ ೪ ॥

ಭಾಮಿನಿ.

ಬಿದ್ದನಮರಾರಾತಿ ನೆತ್ತರು । ಹಾಯ್ದುದಾಗಲೆ ಮುಖದಿ ಪದ ಹತಿ । ಬುದ್ಧಿ ಕಲಿಸಿತು ಖಳಗೆ ಹರಿಮಹಿಮೆಗಳನೇನೆಂಜೆ ॥ ಜೋದ್ಯ ವಿದು ದನುಜಂ ಬಳಿಕ ತ । ನ್ನುದ್ಭುರುಟುತನವುಳಿದು ಹರಿಯನು । ಶ್ರದ್ಧೆಯಲಿ ಪೊಗಳುತ್ತ ಜಯಜಯವೆನುತ ವಂದಿಸಿದ ॥ ೧ ॥

ರಾಗ ಬೇಗಡೆ, ಅಷ್ಟತಾಳ.

ಪಾಲಿಸೈ ಗೋಪಾಲ ವನಮಾಲ । ದುರಿತಾಬ್ಧಿವಡಬ ಸು । ಶೀಲ ದೇವಕಿಬಾಲ ಶ್ರೀಲೋಲ ॥ ಬೀಳುಗೊಡು ಕೈವಲ್ಯಕವನಿಯ । ಮೇಲೆ ನಾನೀ ವೇಳೆಗೆಸಗಿದ । ಕೀಳು ಕರ್ಮವ ಕ್ಷಮಿಸು ಜನ್ಮಕೆ । ಬೀಳಿಸದಿರು ದಯಾಲು ನರಹರೆ ॥ ಪಾಲಿಸೈ ॥ ೧ ॥ ಧರೆಯೊಳೆಂದೂ ಸ್ಮರಿಸುವಂತೆನ್ನ । ನೆಲೆಗೊಳಿಪುದು ಕಳೇ । ಬರವ ಶುದ್ಧೀಕರಿಸಿ ಸಂಪನ್ನ ॥ ವಿರಚಿಸಸ್ಥಿಯ ಪರಮ ಶಂಖವ । ಕರದಿ ಪಿಡಿದದ ಪೊರೆ ಕೃಪೆಯೊಳೆಂ । ದೆರಗಲಚ್ಯುತ ವರವನಿತ್ತಡೆ । ತೆರಳಿದನು ಸುರಪುರಕೆ ದಾನವ ॥ ಪಾಲಿಸೈ ॥ ೨ ॥

ವಾರ್ಧಿಕ್ಯ.

ಇಳೆಯಧಿಪ ಕೇಳು ಖಳನಂ ಸೀಳೆ ನೋಡಿಮೊಡೆ । ಒಳಗೆ ಗುರುಸುತನಿಲ್ಲದಿರೆ ತದಸ್ಥಿಯನೆತ್ತಿ । ಒಲಿದು ವಾದ್ಯೋತ್ತಮುವ ಪಾಂಚಜನ್ಯವ ರಚಿಸಿ ಬಲರಮಾಧವರು ಬಳಿಕ ॥ ಲಲಿತವಹ

ಪಾಂಚಜನ್ಯವ ಪೂಜಿಸುವ ನರ। ರ್ಗಳ ದುರಿತಗಿರಿ ಜರಿಯಲೆಂದು ಕರುಣಿಸಿ ವರವ । ನಿಲದೆ ಜೈಮಿನಿಪುರಕೆ ತೆರಳಿ ಶಂಖನಿನಾದವುಂ ಗೈದನಾ ಕೃಷ್ಣನು ॥ ೧ ॥

ಕಂದಪದ್ಯ.

ಕೇಳುತ್ತಚ್ಚರಿಯಿಂದಾ । ಕಾಲಂ ನಡೆತಂದು ನೋಡಿ ಸಂತಸ ಗಡಲೊಳ್ ॥ ತೇಲಾಡುತ ಮಣಿದಂಘ್ರಿಗೆ। ನೀಲಾಂಗನ ಭಕ್ತಿಯೊಳುರೆ ಸಂಸ್ತುತಿಗೈದಂ ॥ ೧ ॥

ವಾರ್ಧಿಕ್ಯ.

ಜಯತು ಜಯ ಕರುಣಾಲವಾಲ ಮಾನುಷಲೀಲ । ಜಯತು ಜಲದನಿಭಾಂಗ ರಂಗ ಗೋಕುಲಸಂಗ। ಜಯ ಕಾಶ್ಯಪಾಪತ್ಯ ನಿತ್ಯ ಸಜ್ಜನಭೃತ್ಯ ಜಯತು ಸಂಹಾರದೈತ್ಯ ॥ ಜಯ ಕಮಲಭವತಾತ ದಾತ ಭರ್ಗಪ್ರೀತ । ಜಯ ಸಚ್ಚಿದಾನಂದ ನಂದಪಿಕಮಾಕಂದ । ಜಯ ನುತಸಹಸ್ರಾಕ್ಷರಕ್ಷ ನರಹರ್ಯಕ್ಷ ಜಯತು ಜಯ ಸಲ ಹೆಂದನು ॥ ೧ ॥

ರಾಗ ಶಂಕರಾಭರಣ, ತ್ರಿವುಡೆತಾಳ.

ಈ ವಿಧದಿ ನುತಿಸಿತ್ತು ಕಾಣ್ಕೆಯು । ನಾ ವಿವಸ್ವಾ–ನಾತ್ಮಜ । ಭಾವಶುದ್ಧಿಯೊಳೆಂದ ಕಾಂಬಡೆ। ದೇವರಡಿಯು॥ ೧॥ ಆವ ನೋಂಪಿಯು ನೋಂತೆನೋ ಮು। ಸ್ನಾವ ಪುಣ್ಯಾ–ಫಲಿಸಿತೊ। ಸೇವಕಗೆ ಬೆಸನೇನು ಕಜ್ಜಗ । ಳಾವುದೊಡೆಯ ॥ ೨ ॥ ಎನಲು ಕೇಶವನೆಂದ ಸಾಂದಿಪ। ತನುಜನಳಿದ–ಕಡಲೊಳು । ದನುಜ ಶಂಖನೊಳಾತನಂ ತೋ । ರೆನಲು ನುಡಿದ ॥ ೩ ॥ ಮಾರಲಾರೆನು ನುಡಿಯ ಜೀವರು। ಪ್ರಾರಬು ಧದಾ–ಕರ್ಮದಿ। ಸೇರುವರು ನರಕವನಿದಕೆ ಪರಿ। ಹಾರವುಂಟೆ॥ ೪ ॥ ಮುರುಳಲಾ ತಾನೊಲಿದ ಪ್ರಾಣಿಗೆ । ದುರಿತಬಾಧೇ–ಇರ್ಪುದೆ। ಭರ ದೊಳೀಯೆನಲಿತ್ತನಂತಕ । ಗುರುಜನನ್ನ ॥ ೫ ॥

ವಾರ್ಧಿಕ್ಯ.

ಹರಿಕುಲಜ ಕೇಳವನ ಹರಿಯಿತ್ತು ಸುಲಲಿತಲ। ಹರಿಯಡಿಗೆ ವಂದಿಸಲು ಹರಿಯುರನ ಬೀಳ್ಕೊಟ್ಟು। ಹರಿವೇಗದಿಂದಾಗ ಹರಿಲಿಂಗ ವರಪುರಕೆ ಹರಿತಂದು ಗುರುಚರಣಕೆ ॥ ಹರಿಸದಿಂದೆರಗಿ ಬುಧಹರಿ ಸುತನನೀಯಲ್ಕೆ । ಹರಿಜಾನ್ವಯಂ ಪೊಗಳೆ ಹರಿಯುದಾನಂದದಿಂ। ಹರಿತ ಪೀತಾಂಬರರ ಹರಸಿದಂ ಸಾಕ್ಷಾತ ಹರಿಯಂಶರೆಂದು ಬಗೆದು ॥ ೧ ॥

ರಾಗ ಧನಾಸರಿ, ರೂಪಕತಾಳ.

ಧನ್ಯನಾದೆನ್ನೈ ಭಲಾ। ಜೀವಿತ ಸಫಲ। ಧನ್ಯನಾದೆನ್ನೈ ಭಲಾ॥ ॥ ಪಲ್ಲ ॥ ಪುಣ್ಯಕರರೆ ನೀವೆನಗಾ। ಪನ್ನರಾದ ಮೇಲೆ ಜಗದಿ॥ ಧನ್ಯ ॥ ॥ ಅನುಪಲ್ಲ ॥ ಕ್ಷಿತಿಗಧೀಶರಾಗಿ ಸಾಧು । ತತಿಶರಣ್ಯರಾಗಿ ಕೀರ್ತಿ । ಯುತ ಮಹಾತ್ಮರಾಗಿರೆನುತ । ಶ್ರುತಿವಿದನಾಶೀರ್ವದಿಸಿದ ॥ ಧನ್ಯ ॥ ॥೧॥ ಸಕಲಲೋಕನಾಥರಾಗ। ಭಕುತಿಯಿಂದ ಗುರುವಿಗೆರಗಿ। ನಿಖಿಲ ಗುಣರು ಸಂತಸದಿ ಗು। ರುಕುಲದಿಂದೆ ಮಧುರೆಗೈದೆ ॥ ಧನ್ಯ ॥ ೨ ॥

ವಾರ್ಧಿಕ್ಯ.

ಅರಸ ಕೇಳ್ಪೈ ರಾಮಕೃಷ್ಣರಿಂತೈತರಲು। ಹರುಷದಿಂ ಮಧುರಾ ಪುರದ ಜನರ್ಶಶಿಯಿದಿರ। ಶರಧಿಯಂತುಬ್ಬೆದ್ದು ಸಂಭ್ರಮದಿ ಕರೆತರಲು ರಥವನಿಳಿದತುಳ ಬಲರು ॥ ಗುರು ವಿಪ್ರ ಜನನಿ ಜನಕರ ಪದಕೆ ವಂದಿಸುತ । ಅರಮನೆಯ ಪೊಕ್ಕರತಿ ವಿಭವದಿಂದಾಮೇಲೆ । ಹರಿ ಯೊಲಿದಡಾವುದರಿದಾಯ್ತು ಭ್ಯುದಯಕೆ ಮೊದಲಾ ಯದುಪ್ರವರ ಕುಲಕೆ ॥ ೧ ॥

ಭಾಮಿನಿ.

ಇಂತು ಮಧುರಾಪುರದಿ ಬಲ ಮಾ। ಕಾಂತರಖಿಳ ಸುಬಾಂಧ ವರನ । ತ್ಯಂತ ಸುಖಸಾಮ್ರಾಜ್ಯದೊಳು ವಿಹರಿಸುವ ಪ್ನೋಲೆಸಗಿ ॥ ಸಂತಸದೊಳಿರೆ ಕೃಷ್ಣನೊಂದಿನ । ಚಿಂತಿಸುತ ಗೋಕುಲವ ತನ್ನೇ। ಕಾಂತಭಕ್ತರ ದೇವನುದ್ಧವನನ್ನು ಕರೆದೆಂದ ॥ ೧ ॥

## ರಾಗ ಕಲ್ಯಾಣಿ, ಝಂಪೆತಾಳ.

ಭಾಗವತಗಗನರವಿ। ಪೋಗು ಗೋಕುಲದಾ ವಿ। ಯೋಗಿಗಳ ಸಂತೈಸು । ಬೇಗ ಚಿತ್ತೈಸು ॥ ಪಲ್ಲ ॥ ತಂದೆತಾಯಿಗಳನ್ನು । ಬಂಧು ಬಳಗಂಗಳನು। ದಂದುಗವಗೊಳಿಸಿದೆನು। ಸಂದೇಹವೇನು ॥ ಸಂದ ಕೆಲಸಕ್ಕಾಗಿ । ಬಂದೆನವರನು ತೊಲಗಿ । ಚಂದದಿಂದೈದಿ ನೀ । ನಿಂದರುಹು ಸುಗುಣಿ ॥ ೧ ॥ ಎನ್ನನೇ ನಂಬಿ ಮನ । ವನ್ನಿರಿಸಿ ಗೋಪೀಜನ ; ಚಿಣ್ಣ ಮನೆ ಕಾದಲರ । ಗಣ್ಯವಿಡದವರ ॥ ಸನ್ನುತೆ ಯರನು ಹರಣ। ದನ್ನೆಯರ ವಂಚಿಪೆ ನಾ। ಗನ್ನಗತಕದೊಳೆಂತು। ಅನ್ಯಾಯವಾಂತು ॥ ೨ ॥ ನೀನೆನ್ನ ನಚ್ಚಿನಸ। ಮಾನ ಬಾಂಧವನಾ ಸ । ತೀನಿವಹ ವಿಾನಾಂಕ । ಬಾಣಹತಿಗನಕ ॥ ಹಾನಿಗೊಳದಿರೆ ಭಕ್ತ । ಪ್ರಾಣ ತಾನೆಂದೆನುತ । ಜಾಣ ಪೇಳ್ದವರ ಸು । ಮ್ಮಾನ ದಿಂದಿರಿಸು ॥ ೩ ॥

## ಭಾಮಿನಿ.

ಹರಿಯು ವಚನವ ವೈಷ್ಣವೋತ್ತಮ । ಶಿರದೊಳಾಂತಡರುತ್ತ ರಥವನು । ತೆರಳಿ ಬರೆ ಗೋಕುಲಕೆ ರವಿ ಪಡುವೆಟ್ಟೆಡೆಯ ಸೇರೆ ॥ ಪರಿಕಿಸಲು ಕಾಲಾಖ್ಯ ವಣಿಜನು । ಧರೆಯ ಜನರಾಯುವನಳೆದು ಬದಿ। ಗಿರಿಸಿರುವ ಚೆಂಬೊನ್ನ ಬಳ್ಳದೊಲೆಸೆಯಲಿನಬಿಂಬ ॥ ೧ ॥

## ವಾರ್ಧಿಕ್ಯ.

ಬರುತ ಕಂಡನು ಭಕ್ತ ಮುಂದೆಸೆವ ಗೋಕುಲವ । ನರಸ ನಿದ್ರಾಸಕ್ತನಯ್ಯಂ ಜಡಾಶ್ರಯಂ । ತರಳನಶರೀರನೊಡವುಟ್ಟಿದಂ ಕ್ಷಯರೋಗಿಯೆನುತ ರಮೆ ತನಗಿರಲ್ಕೆ ॥ ವರನಿಲಯಮಂ ಪುಡುಕು ತಿಳೆಯೊಳ್ ವ್ರಜದಿ ಸು । ಸ್ಥಿರವಾಗಿ ನೆಲಸೆ ಹರಿಯವತರಿಸೆ ಪಾಲ್ಗಿ ಸ । ಕ್ಕರೆ ತೀವಿದಂತಾಗೆ ಮಧುರೆಗಿನನ್ನೈದಲೊಡನ್ನೈದದಿಹಳೆಂಬ ತೆರದಿ ॥ ೧ ॥

ಕಂದಪದ್ಯ.

ತುರುವಿಂಡುಗಳಂ ಕರುಗಳ । ನೆರವಿಯು ಮನೆಮನೆಯ ದೇವ ಪೂಜೆಯ ಗೋಪೀ ॥ ಹರಿಕೀರ್ತನೆಗಳ ಸೊಬಗಂ । ನಿರುಕಿಸುತಂ ಕೈಮುಗಿವುತ ಗೋಕುಲವೊಕ್ಕಂ ॥ ೧ ॥

ಭಾಮಿನಿ.

ಇಂದುಕುಲ ಕೇಳಿಂತು ಮಾತಕಿ । ಸ್ಯಂದನವನಿಳಿಯುತ್ತ ಗೋಪನ । ಮಂದಿರವ ಪೊಗಲೊಡನೆ ಕಾಣುತ ನೀಗಿದಸು ಬಂದ ॥ ಅಂದದಿಂ ಕರೆದೊಯ್ದು ಬಹಳಾ । ನಂದದಿಂ ಸತ್ಕರಿಸಿ ನಂದನು । ಬಂಧುವಿನ ಮಾರ್ಗಾಯಸವ ಕಳೆದುಣಿಸುತೊಳ್ನುಣಿಸ ॥ ೧ ॥

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಕುಳ್ಳಿರಿಸಿ ಮಂಚದಲಿ ಲಕ್ಷ್ಮೀ । ವಲ್ಲಭನನೆಂತಂತೆ ಮೃದು ಪದ । ಪಲ್ಲವವನೊತ್ತುತ್ತ ನಂದನು । ಸೊಲ್ಲಿಸಿದನು ॥ ೧ ॥ ಕುಶಲರೇ ವಸುದೇವ ಮುಖ್ಯರು । ಅಸುರಹರ ಬಲರಿಹರೆ ಸೌಖ್ಯದೊ । ಳೆಸೆವ ಸಮ್ಮಾಪ್ತರಿಗೆ ಸತಿಸುತ । ವಿಸರ ಸಹಿತ ॥ ೨ ॥ ಚಿತ್ರವಿಭ್ರಮವಿಲ್ಲಲ್ರಿಭ । ಕ್ಷ್ತೋತ್ರಮರು ಪೊಸತೈಸೆ ಬಹದು ಕೃ । ತಾರ್ಥನಾವೆನೆನುತ್ತ ನುಡಿದನು । ಮತ್ತೆ ನಂದ ॥ ೩ ॥

ರಾಗ ಕೇತಾರಗೌಳ, ಝಂಪೆತಾಳ.

ವೃಷ್ಣಿಕುಲವನಚಂದನ । ನೆನೆವನೇ । ಕೃಷ್ಣನೆಮ್ಮನು ದೀನನ ॥ ತೃಷ್ಣೆಯನು ಪೂರಯಿಸಲು । ಬಹನೆಂದು । ಜಿಷ್ಣು ಸಹಾಭ ಪೇಳು ॥ ॥ ೧ ॥ ನಂದಗೋಕುಲವ ಮೇಣು । ಗೋಧನವ । ವೃಂದಾವನವ ತನ್ನನು ॥ ಒಂದೆ ಮನದಿಂನಂಬಿಹ । ಗೋಪಿಯರ । ವೃಂದವನು ನೆನೆವನೇ ಹಾ ॥ ೨ ॥ ವಾತಾದಿ ಖಳರ ಕೊಂದ । ಅತಿವೃಷ್ಟಿ । ಪಾತ ಕದ್ರಿಯನೆತ್ತಿದ ॥ ಘಾತಿಸಿದ ಕಾಳೀಯನ । ಕಾಳುರಿಯ । ಭೀತಿಯನು ತಳಿಸಿದವನ ॥ ೩ ॥ ನೀಲಗಾತ್ರನ ಮೋಹನ । ಮೂರುತಿಯ । ಬಾಲ ಲೀಲೆಗಳ ತೆರನ ॥ ಪೇಳೆಷ್ಟು ದಿನಕೆ ಕಾಂಬೆ । ಹರಿ ತೋರ್ಪ । ಕಾಲ ವಿನ್ನಾವುದೆಂಬೆ ॥ ೪ ॥

ಕಂದಪದ್ಯ.

ಇಂತಾ ನಂದಂ ಹರಿಗುಣ । ಚಿಂತನೆಯೊಳ್ ತನ್ಮಯನೆನಿಸಿ ಮಿಗೆ ಸಮಾಧಿ ॥ ಸ್ವಾಂತಾನಂದದೊಳುಸಿರದೆ । ನಿಂತಿರಲವನರಸಿ ಯುದ್ಧವಂಗಿಂತೆಂದಳ್ ॥ ೧ ॥

ರಾಗ ಬೇಗಡೆ, ತ್ರಿವುಡೆತಾಳ.

(ಧಾಟಿ:—ಹೀಗೆ ಪೇಳುವರೆ ಸಖೀ । ಚಂದಿರಮುಖೀ ॥ ಎಂಬಂತೆ)

ಬಾಲನೆಂದಿಗೆ ಬಂದಪ । ಯದುಕುಲದೀಪ । ಬಾಲನೆಂದಿಗೆ ಬಂದಪ ॥ ಪಲ್ಲ ॥ ಬಾಲನೆಂದಿಗೆ ಬರುವ ತುರುಗಳ । ಸಾಲ ಬೆಂಬಳಿ ಕೊಳಲನೂದುತ । ಮೇಳದಣುಗರ ಕೂಡೆ ಶ್ರೀಗೋ । ಪಾಲ ಮಕ್ಕಳ ರತುನಸೊಲಿದು ॥ ಬಾಲನೆಂದಿಗೆ ॥ ಅನುಪಲ್ಲ ॥ ಚಿನ್ನಕೇಶವ ನೊಸರ । ಹಾಲನು ಮೇಣು । ಬೆಣ್ಣೆಯ ಗೋಪಿಯರ । ಕಣ್ಣನು । ಮರೆಗೈದು ಕಳುತಲೆ । ಮಣ್ಣನು । ಮೆಲುತಿಹುದ ಕಂಡವ । ನಣ್ಣನು । ಕರೆದೊಯ್ದು ತೋರಿದ । ಡೆನ್ನನು । ನಾ ಕೇಳಲಿಲ್ಲೆಂ । ದೆನ್ನುತಲೆ ಮೋಹನ್ನ ಬಾಯ್ದೆರೆ । ವನ್ನಮಲ್ಲಿ ಜಗತ್ತ ಕಂಡಾ । ಪನ್ನಳಾಗೆ ನಾ ಚಿನ್ಮಯಾತ್ಮ ಪ್ರ । ಸನ್ನನಾಗುತಲೆನ್ನ ಪೊರೆದ ॥ ೧ ॥ ಮತ್ತೊಮ್ಮೆ ಮೊಲೆಗುಡಿದು । ದಣಿಯುವ ಮೊದ । ಲತ್ತಲೈದಲು ನಾನೆಂದು । ಸುತ್ತಲೂ । ಚೆಲ್ಲುತ್ತ ಮೊಸರನು । ಹತ್ತಲು । ನೆರೆಮನೆಗೊಡನೆ ಬೆಂ । ಬತ್ತಲು । ನಗುತೋಡುವನ ಬಲಿ । ದಿತ್ತಲು । ನಾ ತಿರುಗಲೊರಳೆಳೆ । ಯುತ್ತ ಶ್ರೀಹರಿ ಕಿತ್ತಡಾ ಜುಗ । ಮತ್ತಿಗಳ ನಾವತ್ತಡಿರುತಲೆ । ನಿತ್ಯನಾಗಿ ಕೊಲುತ್ತ ಖಳರಗ । ವೆತ್ತಿ ಮಧುರೆಗೆ ಕೂರ್ತು ನಡೆದ ॥ ಬಾಲನೆಂದಿಗೆ ॥ ೨ ॥

ಭಾಮಿನಿ.

ಅರಸ ಕೇಳ್ಳೆ ಹರಿಗುಣವನೀ । ತೆರದಿ ಹೊಗಳುತ ಹರುಷ ರಸದು । ಬ್ಬರದ ಪುಳಕದಿ ತೊರೆದ ಮೊಲೆಗಳೊಳಂಬುರುಹವದನೆ । ಇರೆ ಯಶೋದಾನಂದರನು ಹರಿ । ವಿರಹಸಂತಪ್ತರನು ವೈಷ್ಣವ । ರೆರೆಯು ಕಂಡತಿ ಭಕ್ತಿಯಲಿ ಮಣಿದೆಂದನುದ್ಧವನು ॥ ೧ ॥

### ರಾಗ ಸುರುಟಿ, ಅಷ್ಟತಾಳ.

(ಧಾಟಿ:—ಭಳಿರೆ ಮೆಚ್ಚಿದೆ ಕೇಳು ಖಳಕುಲಮಣಿಯೇ ॥ ಎಂಬಂತೆ)

ಶೋಕಿಪುದೇತಕೆ ಗೋಕುಲಜೆರೆಯು । ನಾ ಕಾಣೆ ತವ ಪುಣ್ಯಾನೀಕಕೆ ದೊರೆಯು ॥ ಶೋಕಿಪು ॥ ಪಲ್ಲ ॥ ಆರುಂಟು ನಿಮ್ಮಂತೀ । ಧಾರುಣಿಮಧ್ಯದಿ । ಭೂರಿಭಾಗ್ಯರು ಮುನಿ । ವಾರಹೃತ್ಪಂಕಜ । ದೂರ ಶ್ರೀಕೃಷ್ಣನೊಳು । ಪುತ್ರಪ್ರೇಮ । ಬೇರುವರಿಯೆ ಕೃಪಾಳು । ನಿಮ್ಮೊಲು ಧನ್ಯ । ರಾರು ತ್ರಿಗುಣಗಳೊಳು । ತುಂಬಿದ ಮಾಯು । ನಾರಿಯಾವನೆ ಸೇವಿಪಳು ನಿತ್ಯ ಪೇಳು ॥ ಶೋಕಿಪು ॥ ೧ ॥ ಈ ವಸುಂಧರೆ ದೂರ । ಲಾ ವಿಶ್ವಪತಿ ವಾಸು । ದೇವಾಖ್ಯೆಯನು ತಾಳ್ದ । ನಾವನ ನಾಮಪ । ಜೀವ ಪೋಗುವ ಕಾಲದಿ । ಜಪಿಸಿದರೊಮ್ಮೆ । ಕೇವಲವಾ ಕೃತ್ಯದಿ । ಮುಕ್ತಿಯ ಕೊಡು । ವಾ ವೈಕುಂಠನು ನಿಜದಿ । ನಂದನನೆಂಬ । ಭಾವನೆಗೊಳಗಾದ ಮೇಲಿನ್ನು ಗುಣಧೀ ॥ ಶೋಕಿಪು ॥ ॥ ೨ ॥ ಅಂತಿಕದೊಳಗಿರ್ದ । ಚಿಂತ್ಯನನಗಲ್ದ ನಿ । ಮ್ಮಂತರಂಗ ವ್ಯಥೆ । ಗಂತರಾತ್ಮನು ವಿಷ್ಣು । ವಂತಲ್ಲವೇ ಯೋಚಿಸು । ನಿನ್ನೊಳು ಕಂಡ । ನಂತನ ಸುಖಿಯೆನಿಸು । ಸರ್ವಾತ್ಮನ । ಚಿಂತೆಯೊಳಾನಂದಿಸು । ಸುತ ಪಿತರೆಂಬ । ಭ್ರಾಂತಿ ಸಲ್ಲದು ತತ್ತ್ವವರಿಯಲು ಲೇಸು ॥ ಶೋಕಿಪು ॥ ೩ ॥ ಎರಡೊಂದು ಗುಣದೊಳು । ಭರಿತನೆನಿಸಿ ವಿಧಿ । ಹರಿಹರರೂಪದಿ । ಪೊರೆವನು ಜಗವನ್ನು । ಪರಂಜ್ಯೋತಿಯಂತ್ಯದಲ್ಲಿ । ಏಕಾಂಗಿಯಾ । ಗಿರುವ ಸಲ್ಲೀಲೆಯಲ್ಲಿ । ತಾ ತಿರುಗಿಳೆ । ತಿರುಗಿತೆಂಬಂದದಲಿ । ತೋರ್ಪನು ತಥ್ಯ । ವರಿಯದ ಮೂಢರ್ಗೆ ನಿರ್ಗುಣನೆಂದು ತಿಳಿ ॥ ಶೋಕಿಪುದೇತಕೆ ॥ ೪ ॥

### ಕಂದಪದ್ಯ.

ಇಂತೆನುತುದ್ಧವ ನಂದನ । ಸಂತೈಸುತಲಾತ್ಮವಿದ್ಯವುಂ ತಿಳಿಯುವ ಪೊಲ್ ॥ ತಾಂ ತತ್ತ್ವವನರುಹುತ ಬಳಿ । ಕಂ ತರುಣೀಮಣಿ ಯಶೋದೆಗೆಂದನು ನಯದಿಂ ॥ ೧ ॥

ರಾಗ ನವರೋಜು, ಆದಿತಾಳ.

ಲಾಲಿಸು ನಂದನ ಜಾಯೆ । ಶ್ರೀ । ಲೋಲನ ಸಾಕಿದ ತಾಯೆ ॥ ಪೇಳುವುದೇನು ವಿ । ಶಾಲಮತಿಯೆ ನಿನ್ನ । ಪೋಲುವ ಸತಿಯರು । ಮೂಲೋಕದಿ ನಹಿ ॥ ಲಾಲಿಸು ॥ ೧ ॥ ಚೆನ್ನಿಗಗೇ ವೊಲೆಗೊಟ್ಟು । ಪೋಣು । ರನ್ನದೊಟ್ಟಿಲೊಳಿಟ್ಟು ॥ ಕನ್ನೈದಿಲೆ ವೈ । ಬಣ್ಣನ ಸಲಹಿವೆ । ಮನ್ನಣೆಯಲ್ಲಿದು । ಧನ್ಯಳು ನೀನೌ ॥ ಲಾಲಿಸು ॥ ೨ ॥ ಜಗದಯ್ಯ ಮಾಧವನು । ನಿನ್ನ । ಮಗನೆಂಬರೆ ತಾನು ॥ ಮಗನಾಗನೆಲೋ । ಗರಿಗೆಲ್ಲರಿಗಿದು । ನಿಗಮವಚನ ನಿಮ್ಮ । ನಗಲದೆಂತಿರ್ಪನು ॥ ಲಾಲಿಸು ॥ ೩ ॥ ಇಳೆಯ ದುಷ್ಟರ ಕೊಂದು । ಸುರ । ಕುಲವ ರಕ್ಷಿಸ ಬಂದು ॥ ಬಳೆದೀಯೆಡೆ ನಿಜ । ಕೆಲಸಕೈದಿದ ಹರಿ । ಸಲಹುವೆ ಬಿಡಿಮನ । ದಳಲೆಂದುಸುರಿದ ॥ ಲಾಲಿಸು ॥ ೪ ॥

ಭಾಮಿನಿ.

ಎಂದು ಭಕ್ತರ ದೇವನುದ್ಧವ । ತಂದ ಹರಿಯುಚಿತಗಳನೀಯುತ । ನಂದಗೋಪ ಯಶೋದೆಯರ ಹರಿವಿರಹಶೋಕಾಗ್ನಿ ॥ ನಂದುವಂದದಿ ಸೂಕ್ತಿಯಮೃತದ । ಬಿಂದುಗಳ ಸುರಿಸುತ್ತಿರಲು ನಿಶಿ । ಸಂದುದರೆಗಳಿಗೆಯ ವೊಲಾ ಗೋವಿಂದದಾಸರಿಗೆ ॥ ೧ ॥

ವಾರ್ಧಿಕ್ಯ.

ಪೂರ್ವದಿಕ್ಕಾಮಿನಿಯ ಮೊಗಸೆಂದುರದ ಬೆಳಗೊ । ಶರ್ವರೀಕರಸಖಿಯ ಕೀಳ್ಗೈದು ಪದ್ಮಿನಿಯು । ಬೀರ್ವ ಹಾಸದ್ಯುತಿಯೊ ರವಿರಥಾಶ್ವಗಳ ಖುರಹತಿಗೆದ್ದ ಕೆಂಧೂಳಿಯು ॥ ಪರ್ವುಗೆಯೊ ಪೇಳಲರಿದೆಂಬನಿತರೊಳ್ ಕೂಗ । ಉರ್ವರೆಯನೆಚ್ಚರಿಸೆ ಕುಕ್ಕುಟಂ ಖಳರದೆಯ । ಗುರ್ವಿಸಲು ಮಬ್ಬುಗಿರಿಗುಹೆಯ ಪಥಮಂ ಪಿಡಿಯಲರುಣೋದಯಂ ಮೆರೆದುದು ॥ ೧ ॥

ರಾಗ ಸಾಂಗತ್ಯ, ರೂಪಕತಾಳ.

ಅರಸ ಕೇಳಾ ವೇಳೆಯರಿತೆದ್ದು ಗೋಪಿಕೆ । ಯರು ಸುಸ್ವರದಿ ತೋಷವಾಂತು ॥ ಹರಿಲೀಲೆಗಳ ಭಕ್ತಿ । ಭರದಿ ಪಾಡುತಲಿ ಮೊ । ಸರ

ಕಡೆಪುತ್ತಿರ್ದರಾಗ ॥ ೧ ॥ ದುರುಳರ ತರಿದೆ ಕಾ । ಳರಿಯ ಸಂದಿಸಿದೆ ಶ್ರೀ । ವರನೆ ವೈದೋರುದೋರೆನುತ ॥ ಸ್ಮರಿಸಲು ಪರಿಯೆ ತಿ । ಮಿರ ಹರಿಭಜನೆಯಿಂ । ದುರಿತ ಹಿಂಗುವ ತೆರದಿಂದ ॥ ೨ ॥ ನೀರೆಯರುಪ ಯದೊ । ಆ ರಾಜಗೇಹದ । ದ್ವಾರದೊಳಿಹ ದಿವ್ಯ ರಥವ ॥ ವಾರುವ ಗಳ ಕಂಡು । ಭೂರಿ ಚೋದಿಗಗೊಂಡು । ಯಾರೋ ಬಂದಿಹರೆಂದು ನೆನೆಸಿ ॥ ೩ ॥

ವಾರ್ಧಿಕ್ಯ.

ವಾರಿಜಾಕ್ಷಿಯರು ನಿಜವರಿಯದೋರೊಬ್ಬರೆ ವಿ । ಚಾರಿಸಲು ರಥದೆಡೆಗೆ ಬಂದು ನೆರೆಯಲ್ಕಿತ್ತ । ವೀರವೈಷ್ಣವನುದ್ಧವಂ ಸೂರ್ಯ ನುದಯದೊಳು ನಿತ್ಯಕರ್ಮಗಳನೆಸಗಿ ॥ ನಾರಿಯರನೀಕ್ಷಿಸಲ್ಕಾ ಸ್ಥಳಕೆ ಬರುತಿರಲ್ । ದೂರದಿಂ ಸತಿಯರಾತನ ನೋಡಿ ಮನದೊಳಿವ । ನಾರಪ್ಪನೆಂದೆನುತಲೋರ್ವರೋರ್ವರ ಕೂಡೆ ಪ್ರಸ್ತಾಪಿಸುತಲೆಂದರು ॥ ೧ ॥

ರಾಗ ಯಮುನಾಕಲ್ಯಾಣಿ, ಅಷ್ಟತಾಳ.

ಯಾರಿವನಮಮ ಸುಂದರಗಾತ್ರ । ಮದನ । ವೀರನ ಪಳಿವವನಹೊ ಚಿತ್ರ ॥ ಯಾರಿವ ॥ ಪಲ್ಲ ॥ ಅರಳುಗಂಗಳ ನಗೆಮೊಗ ನೋಡೆ । ಕೊಂಕು । ಗುರುಳ ದಂತದ ಸಾಲ ಮನವಾಡೆ ॥ ಕೊರಳೊಳಗಿಹ ತುಲಸಿಯ ದಂಡೆ । ಮೇಣು । ನೆರಿದುಟ್ಟ ಪೀತಾಂಬರದ ಪಾಡೆ ॥ ಯಾರಿವ ॥ ೧ ॥ ಅಚ್ಚಗನ್ನಡಿಯ ಪೋಲುವ ಕೆನ್ನೆ । ಮತ್ತಾ । ಸಚ್ಚರಿತನ ರೂಪವೆಲೆ ಕನ್ನೆ ॥ ಅಚ್ಯುತನಿಗೆ ಸಮವಹುದಲ್ಲೆ । ಇವನ । ನೊಚ್ಚತದಿಂ ನುಡಿಸುವ ಕೇಳೆ ॥ ಯಾರಿವ ॥ ೨ ॥

ಭಾಮಿನಿ.

ಯೋಷಿತೆಯರಿಂತುದ್ಧವನ ಶ್ರೀ । ವೇಷಭೂಷಣದಿಂದ ಕೃಷ್ಣನ । ದಾಸನೆಂದೂಹಿಸುತಲಧಿಕ ಮನೋನುರಾಗದಲಿ ॥ ಆಸೆವಟ್ಟಚ್ಯುತನು ನುಡಿದಿಹ । ಭಾಷಿತವ ನೆನೆದುತ್ಸವದಿ ಪರಿ । ವೇಷನಂತಿರೆ ಬಳಸಿ ಕೇಳಿದರುದ್ಧವಂಗೆರಗಿ ॥ ೧ ॥

ರಾಗ ತೋಡಿ, ಆದಿತಾಳ.

(ಧಾಟಿ:—ಕಾಮಿನೀ ಕರೆದು ತಾರೇ । ಎಂಬಂತೆ)

ಆರೆಂಬುದರುಹು ತಂದೆ । ನೀನಿಲ್ಲಿ ಬಂದು । ದಾರ ಸಂದೇಶ ದಿಂದೆ ॥ ಆರ ಬಾಂಧವ ನೀನು । ಕಾರ್ಯಸಂಗತಿಯೇನು । ಶ್ರೀರಮೆ ಯರಸನ । ಚಾರು ಸೊಬಗು ನಿನ । ಗಾರಾಜಿಸುವರೆ । ಕಾರಣವೇನೂ ॥ ಆರೆಂಬುದರುಹು ॥ ೧ ॥ ಯಾದವರೊಳಗೊಬ್ಬನು । ನಾ ಭಾಗವತರ । ಪಾದಪಂಕಜಭೃಂಗನು ॥ ಆ ದಯಾಂಬುಧಿ ನಿಮ್ಮ । ಳಾದ ವಿಯೋ ಗದ । ಖೇದಗಳೆದು ಸ । ಮ್ಮೋದದೊಳಿರಿಸಲು । ಮಾಧವನಪ್ಪಣೆ । ಗೈದಡೆ ಬಂದೆನು ॥ ಆರೆಂಬುದರುಹು ॥ ೨ ॥ ಹರುಷದಿಂದುದ್ಧವನ । ಸತ್ಕರಿಸುತೆಂ । ದರು ಕೃಷ್ಣನೊಳು ದೂಷಣ ॥ ಹೊರಿಸಬಹುದೆ ಹೆತ್ತ । ವರಿಗೆ ಯೋಗಕ್ಷೇಮ । ವರುಹಲು ನಿನ್ನನು । ಕರೆದಟ್ಟಿದನೈ । ಮರೆ ತರೆ ಮುದುಪರ । ಹರಣವುಳಿವುದೆ ॥ ಆರೆಂಬುದರುಹು ॥ ೩ ॥ ಜನನೀ ಜನಕರೊಳಗೆ । ಇರುವಂಥ ಪ್ರೇಮ । ಘನತರವೆಲ್ಲರಿಗೆ ॥ ಮನೆವಾರ್ತೆ ಯನು ಬಿಟ್ಟ । ಮುನಿಯು ಬಿಡದು ಮತ್ತೆ । ವನಜಾಕ್ಷಗೆ ಕೆಳೆ । ತನ ವಾರೊಡನಿ । ಲ್ಯನಿತರ ಕೂರ್ಮೆಯು । ಜನರಾರಿರ್ಪರು ॥ ಯಾರೆಂಬು ದರುಹು ॥ ೪ ॥

ಭಾಮಿನಿ.

ಮಿಕ್ಕವರ ಕೆಳೆ ಬಳೆದಪುದು ಕಾ । ರ್ಯಕ್ಕೆ ತತ್ಸಿದ್ಧಿಯಲಿ ನಿಷ್ಫಲ । ವಕ್ಕು ಭ್ರಮರಕೆ ಕುಸುಮನಿಕರದ ಮೈತ್ರಿಯಂದದಲಿ ॥ ಸಿಕ್ಕಿಹುದು ಸ್ವಾರ್ಥತೆಯೊಳೀ ಜಗ । ವಕ್ಕರಾರೊಡನಾರಿಗೆನುತಲಿ । ದುಃಖದಲಿ ತರುಣಿಯರು ಹರಿಯನು ಜೈವುತಳಲಿದರು ॥ ೧ ॥

ರಾಗ ಎರಕಲಕಾಂಬೋಧಿ, ಏಕತಾಳ.

ಆರು ಕೃಷ್ಣನಿಗೆ । ನಾವೆಮಗವ । ನ್ಯಾರು ವ್ಯಥೆ ಸುಮ್ಮಗೆ ॥ ಆರು ಕೃಷ್ಣನಿಗೆ ॥ ಪಲ್ಲ ॥ ಸೇರಿ ಸಾಮ್ರಾಜ್ಯವು । ವೈರಿಗಳೆಲ್ಲ । ತೀರಿ ಬಲು ಸುಖವು ॥ ನೀರಜನಯನಗಿ । ನ್ನಾರ ಹಂಗೆಮ್ಮ ಸಂ । ಸಾರವೀ

ಚಿಂತೆಯಿಂದ । ಬರುದೊರೆ ಸಿದ್ಧ ॥ ಆರು ಕೃಷ್ಣನಿಗೆ ॥ ೧ ॥ ಓತ ಮನೆ ಮಕ್ಕಳ । ಬಿಡುತ ಗೈದ । ಪ್ರೀತಿಗಿದೆ ಸುಫಲ ॥ ಬೀತ ಮರವ ಪಕ್ಷಿ। ಜಾತ ಬಿಡದೆ ಶ್ರೀಶ । ಗೇತರದೆಮ್ಮ ನಂಟು । ಕನಸಿನ ಗಂಟು ॥ ಆರು ಕೃಷ್ಣನಿಗೆ ॥ ೨ ॥ ಎಚ್ಚರಿಂದಲ್ಲದೆ । ಸ್ವಪ್ನದೊಳು ಯ । ದೃಷ್ಟಿಯು ನೆನಪಹುದೆ ॥ ಅಚ್ಯುತಗೆಮ್ಮೊಳ । ಗಿಚ್ಚೆಯೇನ್ನೈ ನಮ್ಮ । ಹುಚ್ಚು ಮಾತಿದು ಮೋಹಕೆ । ಮುಪ್ಪಿನಿತಿರ್ಕೆ ॥ ಆರು ಕೃಷ್ಣನಿಗೆ ॥ ೩ ॥

ವಾರ್ಧಿಕ್ಯ.

ಪಣವ್ವಧುಗಳರ್ಥಹೀನನ ಭ್ರಷ್ಟನೃಪನ ಪರಿ । ಜನವುಮವಗತ ವಿದ್ಯರೋದಿಸಿದ ಗುರುವ ದ । ಕ್ಷಿಣೆ ಬರಲ್ ಮತ್ತೆ ಯಜಮಾನನಂ ಋತ್ವಿಜರು ಪುಲ್ಗೆ ಬಗೆವರೆ ಲೋಕದಿ ॥ ಎನುತ ಸತಿಯರು ಮುನ್ನ ಕೃಷ್ಣನೊಡನಾಡಿರ್ದ । ವನಕೇಳಿ ವಸ್ತ್ರಾಪಹರಣ ರಾಸಕ್ರೀಡೆ । ಯನು ಭವವ ನೆನೆದು ಪರಮಾನಂದಪರವಶೆಯರಿದ್ದರುದ್ಧವನ ಮುಂದೆ॥ ೧॥

ರಾಗ ಶಂಕರಾಭರಣ, ಏಕತಾಳ.

ಅರಸ ಲಾಲಿಸೀ ಪರಿಯೊಳು । ತರುಣಿಯರು ರಮಾರಮಣನ । ವಿರಹದಿಂದ ಬೆಂದು ಕರಗು । ತಿರೆ ನೈಗಂಪಿಗೆ॥ ಎರಗಲಳಿ ಮೃಣಾಳ ದಂತೆ । ಮೆರೆವ ತೋಳ್ಗಳಿಂದ ತಡೆದು । ಪರಮೆವರಿಗೆ ನುಡಿದಳಾಗ। ಹರಿಣಲೋಚನೆ॥ ೧ ॥ ಆರಡಿಯೆ ನಿದಾನಿಸಸುರ । ವೈರಿ ನಿನ್ನ ಧಣಿ ಯೆನುತ್ತ । ವಿಾರಿ ಗರ್ವದಿಂದ ಬಳಿಗೆ । ಬಾರದಿರು ಖಳ ॥ ನೀರನಸಿ ಯುರೆಮ್ಮ ಸವತಿ । ವಾರವಿಟ್ಟ ಕುಚದ ಗಂಧ। ಸಾರದಳಿವೆ ಮುಟ್ಟ ದೆಮ್ಮ । ದೂರ ಪೋಗೆಲಾ ॥ ೨ ॥ ಚರಣಕೆರಗಿ ಜೀಡಲೇಕೆ । ಅರಿತೆ ವವನ ಕೃತ್ಯವ ನಾ। ಗರಿಕ ಸತಿಯರೊಡಗಲೀಗ। ಮರೆತ ನಮ್ಮನು॥ ಪರಮ ಕುಹಕಿಯಿವಗೆ ಸೋತ। ತೆರನದೆಂತೊ ಲಕ್ಷ್ಮಿ ವೇದ। ಪೊರಲಿ ನಮ್ಮ ಹಾಗೆ ಮುಗ್ಧೆ। ಮರುಳುಗೊಂಡಳು ॥ ೩ ॥

ವಾರ್ಧಿಕ್ಯ.

ಕೊಲುವನೇ ಧರ್ಮಾತ್ಮನಾಗೆ ಭೃಗುಪತ್ನಿಯುಂ । ಬಲಕಟ್ಟುವನ ಶರಣನಾದ ಬಲಿಯುಂ ಲಲನೆ । ಯೊಲಿದು ಬರೆ ಮೂಗಿದು ಮೊಲೆ

ಮೂಗನರಿವನೆ ಕಾಮಿಯುಲ್ಲದಿರ್ದೊಡೆ ಕುಬ್ಜೆಯು ॥ ಕಳೆವರವ ಸಸಿನ ಸ್ವೆವನೆ ಸಾಕು ಗಿರಿಧರನ । ಕೆಳೆತನಂ ಲುಬ್ಧಕನ ನುಡಿಗೆ ಮರುಳಾದ ಮೃಗ । ಗಳ ತೆರದೆ ಕೆಟ್ಟೆವೀ ಲಾಭವೊಂದೇ ಹರಿಯ ಕರಜಕ್ಷತಂ ಕುಚಕ್ಕೆ ॥ ೧ ॥

ರಾಗ ಕೇತಾರಗೌಳ, ಅಷ್ಟತಾಳ.

ದಂತಿಪುರೇಶ ಕೇಳಿಂತು ಮರುಗಿ ಮತ್ತೆ । ಕಾಂತೆಯರುದ್ಧವಗೆ ॥ ನಿಂತು ಪೇಳ್ವರು ನಾವಿ । ನ್ನೆಂತು ಕಾಂಬೆವು ಕೃಷ್ಣ । ನಂತಿಕವನ್ನು ತಂದೆ ॥ ೧ ॥ ಸಂಧಿಗೆಂದೆನುತ ನೀ । ಬಂದುದಾದರೆ ಬಹೆ । ವಿಂದೆಲ್ಲವನು ಮರೆತು ॥ ಸಿಂಧುಜೆಯೆದೆಯೊಳು । ನಿಂದಿರೆ ಹರಿಯು ತೋ । ರ್ಪಂದ ವೆಂತಯ್ಯ ನೀನು ॥ ಚಿತ್ತವಲ್ಲಭಗೆ ನೀ । ಭೃತ್ಯನಲ್ಲವೆ ನಮ । ಗತ್ಯಂತ ಮಾನ್ಯನಯ್ಯ ॥ ಕೃತ್ಯವೇನೆಮಗೆಂದ । ದೈತ್ಯಾರಿ ಪೇಳೆಂದು । ಮತ್ತೆ ಹಂಬಲಿಸಿದರು ॥ ೨ ॥

ಭಾಮಿನಿ.

ಕಂಡ ವಸ್ತುಗಳೆಲ್ಲವನು ಮುಂ । ಕೊಂಡು ಕೃಷ್ಣನೆನುತ್ತ ವಿಭ್ರಮೆ । ಗೊಂಡು ಮಣಿಯುತ್ತಚ್ಯುತನ ಭೂತಾವಳಿಯೊಳಿಂತು ॥ ಪುಂಡರೀಕಾಕ್ಷಿಯರು ಕಲ್ಪಿಪ । ಚಂಡ ಭಕ್ತಿಯನೀಕ್ಷಿಸುತ ನಿಜ । ಮಂಡೆಯಲಿ ಕರಯುಗವ ಜೋಡಿಸುತೆಂದನುದ್ಧವನು ॥ ೧ ॥

ರಾಗ ಘಂಟಾರವ, ಏಕತಾಳ.

ಕೇಳಿರೊಂದು ಮಾತು । ಮನಸಿತ್ತು । ಕೇಳಿರೊಂದು ಮಾತು ॥ । ಪಲ್ಲ ॥ ಕೇಳಿರಿ ತಾಯ್ಗಳಿ । ರಾ ಲಕ್ಷ್ಮೀವರ । ನೂಳಿಗವನು ನಾ । ಪೇಳುವೆ ಮತ್ತೆ ॥ ಅನುಪಲ್ಲ ॥ ಧನ್ಯರಾರು ನಿಮ್ಮ । ಪೋಲುವ । ಪುಣ್ಯವಂತರಮ್ಮ । ತ್ರಿಜಗ । ವನ್ನು ಹುಡುಕಲಮಮ । ದೊರೆಯರ । ನನ್ಯ ವಿಧದ ಪ್ರೇಮ । ಇರಿಸುತ । ಚೆನ್ನಿಗರಾಯಗೆ । ತನ್ನ ಸಮರ್ಪಿಸಿ । ಮುನ್ನ ಸಂಗಸುಖ । ವನ್ನು ಪಡೆದಿರೌ ॥ ಕೇಳಿರೊಂದು ॥ ೧ ॥ ನೇಮ ನಿಷ್ಠೆಗಳಲಿ । ಜ್ಯೋತಿ । ಷ್ಟೋಮಾದಿಕಗಳಲಿ । ಮೋಣಿ । ದ್ವಾಮ

ತಪಂಗಳಲಿ । ಸಿದ್ಧಿಯು । ನಾವು ವಿರಳ ಕೇಳಿ । ಭಕ್ತಿಯೊ । ಲಾ ಮಹಿತನ ಪದ । ತಾಮರಸವ ನೆನೆ । ದಾ ಮನುಜನ ವರ । ಕಾಮಿತ ವಹುದು ॥ ಕೇಳಿರೊಂದು ॥ ೨ ॥ ದಣಿಯುನವನು ಹೊಗಳಿ । ನಿಮ್ಮನು । ತನು ಕೇವಲವಲ್ಲಿ । ಕೃಷ್ಣನ । ಮನವೀ ವ್ರಜದಲ್ಲಿ । ಕರಗುವ । ನಸಿ ನಿಮ್ಮನಗಲಿ । ತಡೆಯದೆ । ಮನಸಿಜಪಿತನೆ । ನ್ನನು ಕಳುಹಿರ್ಪನು । ಮನದೊಲ್ಮೆಯ ನಿ । ಮ್ಮನು ಸಂತೈಸಲು ॥ ಕೇಳಿರೊಂದು ॥ ೩ ॥

ರಾಗ ಸಾಂಗತ್ಯ, ರೂಪಕತಾಳ.

ಎಂದೆನೆ ಗೋಪಿಕಾ । ವೃಂದವಿಂತೆಂದುದು । ತಂದೆ ನೀನೈತಂದ ಕತದಿ ॥ ಇಂದಿರಾವರನ ಗೋ । ವಿಂದದರ್ಶನ ಸೌಖ್ಯ । ವಿಂದೆಮ ಗಾಯ್ತು ಕೇಳ್ ಸುಮತಿ ॥ ೧ ॥ ಎಂತು ನೆನೆವ ಪೌರ । ಕಾಂತಾ ಮೋಹದೊಳೆಮ್ಮ । ಸಂತೈಸಲೆಂದ ಮಾತೇನು ॥ ಸಂತಸದಿಂದೆಮ್ಮೊ । ಳಾಂತ ರಾಸಕ್ರೀಡೆ । ಮುಂತಾದ ಲೀಲೆಗಳನ್ನು ॥ ೨ ॥ ನೆನೆವನೇ ದಾಸಿಯು । ರನು ವೇಣು ನಿಜ ಗುಣ । ವೆನಿಪ ಸಂಗೀತದ ಸೊಬಗ । ಅನುಪಮ ಪ್ರೇಮದೊ । ಳನಘನಾಡಿದ ವೃಂದಾ । ವನಕೇಳಿಗಳ ವಿನೋದಗಳ ॥ ೩ ॥

ಕಂದಪದ್ಯ.

ಭೂವರ ಕೇಳಿಂತೆನುತಂ । ಮಾವರನುರು ಲೀಲೆಗಳನು ಪೊಗಳು ತ್ತಾಗಳ್ ॥ ತಾವರೆಗಂಗಳ ಪೆಂಡಿರ್ । ಭಾವಿಸಿ ಹರಿಚರಣವ ಮಗು ಳಳುತಿಂತೆಂದರ್ ॥ ೧ ॥

ರಾಗ ರೇಗುಪ್ತಿ, ಅಷ್ಟತಾಳ.

ಎಂದಿಗೆ ಮೈದೋರ್ಪನೊ । ಗೋಕುಲಕೆ ಮು । ಕುಂದನೆಂದಿಗೆ ಬರ್ಪನೊ ॥ ಎಂದಿಗೆ ಮೈದೋರ್ಪನೊ ॥ ಪಲ್ಲ ॥ ಸುಂದರನ ವಿಯೋಗ । ದಿಂದ ಬೆಂದರ ದಯ । ಹೊಂದಿ ಸೂಕ್ತಾಮೃತದ । ಬಿಂದುಗರೆದು ಕಾವ ॥ ನೆಂದಿಗೆ ॥ ಅನುಪಲ್ಲ ॥ ಆಸೆಯಿಲ್ಲದೆ ರಂಗನು । ಬಪ್ಪುದು ಹುಸಿ । ಕೈಸೇರೆ ಕಾರ್ಯವಿನ್ನು ॥ ಶ್ರೀಶಗೆ ಹಂಗಿಲ್ಲ । ದಾಸಿಯರೊ

ಮೋಹ । ಪಾಶವೆಳೆವುದೆಮ್ಮ । ಪ್ರೈಸಲೆಂತಿದಸಿನ್ನು ॥ ಎಂದಿಗೆ ॥ ೧ ॥ ದಣಿಯದಿಂದಿರೆಗೀಕ್ಷಿಸಿ । ಮೋಹನ ಮೂರ್ತಿ । ಯನು ಮೌನಿಗಳ ಗರ್ಚಿಸಿ ॥ ಮನುಜರ ಪಾಡೇನು । ವನ ನದಿ ಗಿರಿಗಳು । ಮನಿಶ ಕಾಂಕ್ಷಿಪವಾತ । ನನು ಚಿತ್ರವಿದು ನೋಡೆ ॥ ಎಂದಿಗೆ ॥ ೨ ॥ ಏತಕಿನ್ನೀ ವ್ಯಸನ । ಗತೋದಕ । ಸೇತುವಲ್ಲವೆ ಕೃಷ್ಣನ ॥ ಮಾತೆಮಗೆಮ್ಮ ಬಿ । ಟ್ಟಾತಗೆ ದಿನ ಪೋದ । ಡಾ ತೆರ ನಮಗಾಗೆ । ಖ್ಯಾತರು ನಾವ್ಯೆಸೆ ॥ ಎಂದಿಗೆ ವೈದೋರ್ಪನೊ ॥ ೩ ॥

### ಭಾಮಿನಿ.

ಆರು ಕಾಯ್ವರು ನಿರ್ಗತಿಕರನು । ಮಾರಮಣ ನೀನುಳಿಯ ಲೆಮ್ಮ ಶ । ರೀರ ಪಂಚಪ್ರಾಣ ನೀ ತೊಲಗಿದೊಡೆ ಬದುಕುವೆವೆ ॥ ನೂರು ತಪ್ಪಿರೆ ಮರೆತು ಹಾ ವೈ । ದೋರು ವೈದೋರರಸ ಕರುಣಾ । ವಾರಿಧಿಯೆ ಹಾ ಕೃಷ್ಣ ಭಕ್ತಾಧೀನ ಶರಣಾಗು ॥ ೧ ॥

### ವಾರ್ಧಿಕ್ಯ.

ಭೂರಮಣ ಕೇಳಿಂತು ಹಲುಬಿ ಹರಿಯನು ಹೊಗಳಿ । ಮೇರೆ ಯಿಲ್ಲದ ಕೃಷ್ಣಚಿಂತಾಬ್ಧಿಯೊಳು ಮುಳುಗಿ । ನೀರೆಯರು ಲೌಕಿಕವ ಮರೆದು ಮೂರ್ಛಿಸಿ ಮತ್ತೆ ಚೇತರಿಸೆ ಗೋಪಿಕೆಯರ ॥ ಚಾರು ಸುಪ್ರೇಮೋಪಲಾಲಿತ ಮುಕುಂದಪದ । ವಾರಿಜದ ಭಕ್ತಿಯಂ ವಿಪ್ಲ ಮಯ ಭಾವಮಂ । ವೀರವೈಷ್ಣವರೆರೆಯನುದ್ಧವಂ ಕಂಡು ಮನಕರಗಿ ತಲೆದೂಗುತೆಂದ ॥ ೧ ॥

### ರಾಗ ಮಧ್ಯಮಾವತಿ, ಏಕತಾಳ.

ಚಿತ್ತವಿಪ್ಪುದು ಸಾಧನೆಂದ ಸೂಕ್ತಿಯನು । ಚಿತ್ತದಜ್ಞಾನಾಂಧ ಕಾರದೀಪ್ತಿಯನು ॥ ಪಲ್ಲ ॥ ಅಗಲುವನೆಂತು ನಿಮ್ಮನು ಜೀವತತಿಯ । ಬಗೆಗೆ ಚೇತನರೂಪನಹ ಕೃಷ್ಣರಾಯ ॥ ಗಗನಾಂಬು ಭೂಮ್ಯಾದಿ ಭೂತಪಂಚಕದಿ । ಮಿಗೆ ಸೇರಿ ಭೂತಭೌತಿಕರೂಪ ನಿಜದಿ ।

ಚಿತ್ರವಿಪುದು ॥ ೧ ॥ ತನ್ನ ಮಾಯೆಯೊಳು ಸೃಷ್ಟಿ ಸ್ಥಿತಿ ಲಯವು । ಭಿನ್ನವೆಂದೆನಿಸುವಭಿನ್ನ ಮೂಜಗವು ॥ ಮುನ್ನೀರ ತೆರೆಗಳಂತೊಂದಹ ನಿದನು । ನನ್ನಿಯೆಂದರಿತು ಸುಖಿಸಿರೆಂದನವನು ॥ ಚಿತ್ರವಿಪುದು ॥ ೨॥ ಮೂರು ಗುಣದಿ ತೋರ್ಪ ಮತಿಯವಸ್ಥೆಯಲಿ । ಚಾರು ಶುದ್ಧ ಜ್ಞಾನ ತತ್ತ್ವನಾಗುತಲಿ ॥ ಬೇರೊಂದು ನಿಜವುಂಟೆಂಬುದನು ತೋರಿಸುತ । ವಿಸಾರಿ ತುರೀಯವನಹೆ ತುರ್ಯಾತೀತ ॥ ಚಿತ್ರವಿಪುದು ॥ ೩ ॥ ಮನದ ವಿಕಾರದಿ ಬೇರೆಂದು ತೋರ್ಕುಗ । ಕನಸಿನೊಲ್ ಜಗವೊಂದೆಂದರಿತರೆ ಸಾಕು ॥ ದಣಿದು ನಾ ಬಿಡೆ ತೋರಲರಿದೀ ಸೃಷ್ಟಿಯನು । ಎಣಿಕೆ ಬೇಡೋರ್ಗುಡಿಸೆನು ನಾ ಚಿತ್ಸುಖನು ॥ ಚಿತ್ರವಿಪುದು ॥ ೪ ॥ ಇತ್ತೆನು ನಿಮಗಗಲಿಕೆಯ ನಿಮ್ಮಾಗಳ । ಚಿತ್ತವೆನ್ನೊಳೆ ನಾಂಟಲೆಂದನಿಗಾಲ ॥ ಮುಕ್ತಿಗೆನ್ನಯ ಜ್ಞಾನವಲ್ಲದೆ ಸಲ್ಲ । ಮತ್ತೀ ಜಡಾಂಗಸಂಗದಿ ಹುರುಳಿಲ್ಲ ॥ ಚಿತ್ರವಿಪುದು ॥ ೫ ॥ ನಲ್ಲನೊಂದಿಗೆ ಸತಿಯಿರಲವನಲ್ಲಿ । ನಿಲ್ಲ ದೆರಕಮಿಕ್ಕು ದೂರದೇಶದಲಿ ॥ ವಲ್ಲಭನಿರೆ ತಾತ್ಪರ್ಯದಿ ನೆನೆವಂತೆ । ಬಲ್ಲೆ ನಿಮ್ಮೊಳಿಪನು ಬಿಡಿರೆನ್ನ ಚಿಂತೆ ॥ ಚಿತ್ರವಿಪುದು ॥ ೬ ॥ ತೊರೆದಿರಿ ಸರ್ವಸ್ವವೆನ್ನ ನೇಹಕ್ಕೆ । ಮರೆವೆನೆ ನಿಮ್ಮ ನಾ ಯುಗಯುಗಾಂತರಕೆ ॥ ನೆರೆ ಹಂಗಿಗನ ಮೇಲೆ ತಪ್ಪೆಣಿಸದಿರಿ । ನಿರತ ಭಕ್ತರ ಭಾರ ತನಗೆಂದ ಶೌರಿ ॥ ಚಿತ್ರವಿಪುದು ನಾಥನೆಂದ ॥ ೭ ॥

ಭಾಮಿನಿ.

ಕೇಳಿ ನಿಜನಾಥೋಕ್ತಿಗಳನಾ । ಬಾಲೆಯರು ತಾವಂತರಾತ್ಮನ । ನೀಲಗಾತ್ರನ ತತ್ತ್ವವರಿತುಳಿದರು ಮನೋವ್ಯಥೆಯ ॥ ಮೇಲೆ ಕೃಷ್ಣನು ಕಳುಹಿರುವ ವನ । ಮಾಲೆ ಮೃಗಮದ ಗಂಧಗಳನಿ । ತ್ತಾ ಲಲನೆಯರ ಸಂತವಿಟ್ಟನು ಮುದದೊಳುದ್ಧವನು ॥ ೧ ॥

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಭೂಪಕುಲಪರ ಕೇಳು ಮತ್ತಾ । ಗೋಪಿಯರು ನಿಜವರಿತು ನಿಗೆ ಸಂ । ತಾಪಗಳೆದಾನಂದದಿಂದ ರ । ಮಾಪತಿಯನು ॥ ೧ ॥

ತ್ರದ್ಧೆಯಲಿ ಕೀರ್ತಿಸುತ ತತ್ವದ । ಬದ್ಧ ಪ್ರೇಮದಿ ವೈಷ್ಣವೋತ್ತಮ । ನುದ್ಧವನ ವರ ಸಾಧುಸಂಗದೊ । ಳಿದ್ದರಂದು ॥ ೨ ॥ ಯದುಕುಲಗೆ ತೋರಿಸಿದರೊಲವಿಂ । ಮಧುಹರನ ಸಾಟ್ಯಸ್ಥಳವ ದು । ರ್ಮದ ವೃಷಭ ಧೇನುಕ ಬಕಾದ್ಯರ । ವಧಿಸಿದೆಡೆಯ ॥ ೩ ॥ ಪರಮ ಗೋವರ್ಧನ ಗಿರಿಯ ತಾ । ನಿರುಕಿಸುತಲುದ್ಧವ ಮುದದಿ ಮನ । ಕರಗಿ ಧನ್ಯತೆ ವಡೆಯೆ ನಂದನು । ಹರುಷದಿಂದ ॥ ೪ ॥ ಬಂಧುಗಳಿಗುಚಿತಗಳ ರಾಮ ಮು । ಕುಂದರಿಗೆ ಮಿಗಲೀಯೆ ಕೊಂಡಾ । ನಂದದಿಂ ಬೀಳ್ಕೊಂಡು ಮಧುರೆಗೆ । ಬಂದ ಭಕತ ॥ ೫ ॥

ಭಾಮಿನಿ.

ಬಂದು ರಥದಿಂದಿಳಿದು ಶ್ರೀಶನ । ಮಂದಿರವ ಪೊಗುತಿತ್ತು ಕಾಣ್ಕೆಯ । ವಂದಿಸುತಲುದ್ಧವನು ಕೈಗಳ ಮುಗಿದು ಗೋಕುಲದ ॥ ಮಂದಿಗಳ ಭಕ್ತಿಯನು ಬಿನ್ನಹ । ವೆಂದು ವಿಸ್ತರಿಸುತ್ತಲಿತ್ತನು । ನಂದ ಮುಖ್ಯರು ಕೊಟ್ಟ ವಸ್ತುಪ್ರಕರದುಡುಗೊರೆಯ ॥ ೧ ॥

ರಾಗ ಕಾಂಬೋಧಿ, ಝಂಪೆತಾಳ.

ಲಾಲಿಸುತ್ತರಿಯಣುಗ । ಕೇಳಿ ಹೆತ್ತವರನಾ । ಮೇಲೆ ಗೋಪೀ ಜನದ ಕುಶಲ ॥ ತಾಳಿ ಸನ್ಮುದವ ಕರು । ಣಾಳು ಹೊಂಪುಳಿವೋದ । ಪೇಳಲೇನವನ ವಾತ್ಸಲ್ಯ ॥ ೧ ॥ ಭಕ್ತರನುರಾಗವನು । ಚಿತ್ತದೊಳು ನೆನೆದಶ್ರು । ವೊತ್ತಿ ಪುಳಕದಲಿ ಮೈನೆನೆದ ॥ ಮತ್ತೆ ನಂದನು ಬಂಧು । ವೊತ್ತಕಿತ್ತುಡುಗೊರೆಯ । ನಿತ್ತನುದ್ಧವನು ಮುದದಿಂದ ॥ ೨ ॥ ಚಂದದಿಂದಿರುತಲಿಂ । ತೊಂದು ದಿನ ಗೋಪಾಲ । ಹಿಂದೆ ಸೈರಂಧ್ರಿಗೊರೆದಂತೆ ॥ ಸುಂದರಿಯ ಮನೆಗೈದಿ । ಸಂದ ಭಕ್ತಾಧೀನ । ನೆಂದೆಂಬ ಬಿರುದ ಪ್ರೋಷಿಸಿದ ॥ ೩ ॥

ವಾರ್ಧಿಕ್ಯ.

ನರತನುಜಸುತ ಕೇಳು ಪೆರತೊಂದು ದಿನ ರಮಾ । ವರ ಗಾಂದಿನೀಸುತನ ಮನೆಗೆ ಬಿಜಯಂಗೈದು । ಹರುಷದಿಂ ಭಕ್ತವರ

ಸೆಸಗಿದುಪಚಾರಗಳ ಕೈಕೊಂಡು ವರವನಿತ್ತು ॥ ನೆರೆ ಕೃತಾರ್ಥನ ಗೈದು ಮತ್ತಾತನಂ ಹಸ್ತಿ । ಪುರವರಕೆ ಕಳುಹಿ ಪಾಂಡವರ ಕುಶಲವ ನರಿತು । ಚರಣಭಜಕರ ಕಾಂಕ್ಷೆಗಳನೀವುತಂ ಮಧುರೆಯೊಳಗಿರ್ದ ನಿತ್ಯಾತ್ಮನು ॥ ೧ ॥ ೧೬೬ ॥ ಶ್ರೀಃ ॥

## ಪ್ರಥಮ ಸಂಧಿ ಸಂಪೂರ್ಣಂ

---

# ದ್ವಿತೀಯ ಸಂಧಿ.

### ವಾರ್ಧಿಕ್ಯ.

ಭೂರಮಣ ಕೇಳ್ಮುನ್ನ ಮಗಧನಭವನನೊಲಿಸಿ। ಭೇರಿತ್ರಯವ ಪಡೆದು ಭುಜಗರ್ವದಿಂ ನೃಪರ। ಸೂರೆಗೊಂಡಾ ಚೈದ್ಯ ಬಾಣಾಸುರರ ಕೆಳೆಯು ಗಳಿಸಿ ಸಮ್ರಾಜನೆನಿಸಿ॥ ಭೂರಿ ಮಾರ್ಬಲ ಸಹಿತ ಸುಖದಿಂ ಗಿರಿವ್ರಜದಿ । ಪೌರಸಚಿವಾಪ್ತರಿಂದೋಲಗದೊಳೊಂದು ದಿನ। ಧೀರ ನಿರೆ ವೈಧವ್ಯಶೋಕವಿಹ್ವಲೆಯರಣುಗೆಯರೈದಿ ಮಣಿದೆಂದರು ॥ ೧ ॥

### ರಾಗ ಸಾವೇರಿ, ಆದಿತಾಳ.

ಜನಕನೆ ನೋಡಿದೆಯಾ। ನಿನ್ನಯ ಮುದ್ದು। ತನುಜಾತೆಯರ ವಿಧಿಯ॥ ಮನದೆರೆಯನ ವಧಿಸಿ। ಶತ್ರುಗಳೀ ಭ। ವಣೆಯಿತ್ತರೆಲೊ ಸಾಹಸಿ॥ ಜನಕನೆ॥ ೧॥ ಏತಕೆಮ್ಮಯ ಬದುಕು। ಕೊಡಿಸು ಪ್ರಾಣ। ಘಾತಕೊಂದಾಜ್ಞೆ ಸಾಕು॥ ತಾತ ಮುತ್ತೈದೆ ಭಾಗ್ಯ। ತಪ್ಪಿದ ಘೋರ। ಪಾತಕಿಗಳಿವು ಯೋಗ್ಯ ॥ ಜನಕನೆ ॥ ೨ ॥ ಶರ್ವನನೊಲಿಸಿ ನೃಪ। ವರ್ಗವ ಜೈಸಿ। ಸಾರ್ವಭೌಮಕನೆನಿಪ ॥ ಗರ್ವ ಬಿಸುಡು ಕಂಸನ। ದುರ್ಮರಣದಿ। ಸರ್ವ ವಿಖ್ಯಾತಿ ಶೂನ್ಯ ॥ ಜನಕನೆ॥ ೩ ॥

### ರಾಗ ಮಾರವಿ, ಏಕತಾಳ.

ಕೇಳುತಲಚ್ಚರಿ। ದಾಳುತ ಮಗಧನೃ। ಪಾಲಕ ತಲೆದೂಗಿ॥ ಕಾಲಗತಿಯೆ ಮೃಗ। ಜಾಲ ಹರ್ಯಕ್ಷನ। ಸೀಳಿತೆ ಶಿವಯೆಂದ॥ ೧॥

ಹಾ ಯದುವಂಶವಿ । ಹಾಯುಸಭಾನು ಸ । ಹಾಯುವ ತೊರೆದೆವ್ಮ ॥ ಕಾಯುವ ಬಿಸುಟ್ಟೈ । ಕಾಯೆ ಜಸವ ನವು । ಗಾಯಿತು ದುಷ್ಕೀರ್ತಿ ॥ ॥ ೨ ॥ ಬಂದ ಭವಣಿಗಿ । ನ್ನೆಂದರೆ ಫಲವೇ । ನೆಂದಿಗು ಬಿಡೆ ಹಗೆಯ ॥ ಕೊಂದವರುಸುರನು । ನಂದಿಸಿ ವಿರಮಿಪೆ । ನಿಂದುಧರನೆ ಸಾಕ್ಷಿ ॥ ೩ ॥ ತರಳೆಯರಿರ ನಿ । ವ್ಮರಸನನಿಕ್ಕಿದ । ವರು ವಿಧಿ ಹರಿ ಹರರ ॥ ಮರೆ ಹೊಕ್ಕರು ಸಂ । ಹರಿಸುವೆ ಭಯ ಬೇ । ಡರುಹಿ ನಡೆದ ಪರಿಯ ॥ ೪ ॥

### ರಾಗ ಕೇತಾರಗೌಳ, ಅಷ್ಟತಾಳ.

ತಾತ ಕೇಳ್ ನಿನ್ನ ಜಾ । ವಾತನು ನಂದಸಂ । ಜಾತರ ಬಲ ಕೃಷ್ಣರ ॥ ಓತು ತಾ ಕರೆಸೆ ಬಿ । ಲ್ಲಾತಣಕೈತಂದು । ಖ್ಯಾತರು ಮಧುರೆಯೊಳು ॥ ೧ ॥ ತರಿದು ರಜಕನನ್ನು । ಪೊರೆದು ಕುಬ್ಜೆಯ ಮದ । ಕರಿಯ ಮರ್ದಿಸಿ ಮಲ್ಲರ ॥ ಮುರಿದು ಕಾಂತನ ಸುರ । ಪುರ ಕಟ್ಟೆ ನಮ್ಮನೀ । ಪರಿಭವಗೊಳಿಸಿದರು ॥ ೨ ॥ ವಿಗ್ರಹಕಪ್ಪ ಸ । ಮಗ್ರರು ವ್ರಜದಲ್ಲೆ । ನಿಗ್ರಹಕೊಳಗಾಗಲು ॥ ಉಗ್ರಸೇನಗೆ ಪಟ್ಟ । ವಾಗ್ರಹದಿಂ ಕೊಟ್ಟ । ವ್ಯಗ್ರದಿಂದೆಲ್ಲ ಕೂಡಿ ॥ ೩ ॥

### ಭಾಮಿನಿ.

ಕಾಂತೆ ಸಹ ವಸುದೇವನನು ಬಿಡಿ । ಸಿಂತು ಯದುಕುಲಜರು ಸ್ವರಾಜ್ಯವ । ಪಂಥದಿಂ ಕಟ್ಟೆಯೆ ನಿನಗೆ ಮಲೆತಿರ್ಪರೆನೆ ಕೇಳಿ ॥ ಅಂತಕನ ಹೆತ್ತಯ್ಯನೋ ಕ । ಲ್ಪಾಂತರುದ್ರನೊ ಮಗಧಧರಣೀ । ಕಾಂತನೋಯೆನೆ ಮುಳಿದು ಗದ್ದುಗೆ ಹೊಯ್ದುತಿಂತೆಂದ ॥ ೧ ॥

### ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಸಾಕಕಟ ಸುರ ನರ ಭುಜಂಗಮ । ಭೀಕರನ ಕೊಂದವರು ತುರುಗಳ । ಸಾಕುವವರೇ ನಮ್ಮ ವೋರೆಗೆ । ಕಾಕ ಬಳಿದು ॥ ೧ ॥ ಗುಟ್ಟರಿತೆ ವಸುದೇವ ಕುವರನ । ಹಟ್ಟಿಯೊಳು ಮರೆಸಿಟ್ಟು ಕಂಸನ । ಕುಟ್ಟಿಸಿದ ಮುಝು ಬಚ್ಚಲುರಿ ಮನೆ । ಸುಟ್ಟ ಹಾಗೆ ॥ ೨ ॥ ಕಾಲಗತಿ

ಕೆಣಕದುದು ಯದುಕುಲ । ಜ್ವಾಲೆಯಂ ಶಲಭಗಳ ಪೊಲು ಗೋ। ಪಾಲರನು ನೆರೆ ನಂಬಿ ರಿಪುಗಣ । ಕಾಲನೆನ್ನ ॥ ೩ ॥ ಹರನೊಲುಮೆ ಮೋಣಬ್ಧಿಮುದ್ರಿತ । ಧರಣಿಪರ ಬಲವಿರಲು ಗೋವಳ । ಕುರಿಗಳೆನ ಗೀಡೆಲ್ಲಿ ಸಮರದೊ । ಳರಿಯಬಹುದು ॥ ೪ ॥ ತೋರಿದಪೆನೀ ಕ್ಷಣದಿ ಪ್ರಳಯದ । ಭೈರವನ ಮಾಮಸಕವನು ನೃಪ । ವಾರ ನೆರೆಯಲಿ ಎನುತ ಗದೆಯನು । ವೀರ ತಿರುಹಿ ॥ ೫ ॥ ಬಿಡಿರಿ ಚಿಂತೆಯ ಮಕ್ಕಳಿರ ದಿಟ । ಹಿಡಿರಿ ನಂಬುಗೆಯೆಂದು ದೂತರ । ತಡೆಯದಟ್ಟಿದನಾಗ ಚೇದಿಯ । ಪೊಡವಿಪತಿಗೆ ॥ ೬ ॥

ಭಾಮಿನಿ.

ರಸೆಯಧಿಪ ಕೇಳೈದಿ ದೂತರು । ಅಸಮಬಲ ಶಿಶುಪಾಲಗರು ಹಲು । ಕುಶಲದಿಂದೈತರೆ ಗಿರಿವ್ರಜಸಿದಿರುಗೊಂಡವನ ॥ ಎಸೆವ ವಿಭವದಿ ಸತ್ಕರಿಸಿ ನೃಪ । ಬೆಸಗೊಳಲು ವಾರ್ತೆಗಳ ಚೈದ್ಯನು । ಪೊಸತಿದೇನೈ ಕಾರ್ಯಸಂಗತಿಯೆನುತಲಿಂತೆಂದ ॥ ೧ ॥

ರಾಗ ಕಾಂಬೋಧಿ, ಝಂಪೆತಾಳ.

ರಾಯಪಡೆವಳ ಮಗಧ । ನಾಯಕನೆ ಕೇಳರಿಸಿ । ಕಾಯಜಾಬ್ಜ ಸರಸಿದ್ವಿಪೇಂದ್ರ ॥ ಆಯಿತೇನಿಂದು ಪೂ । ರಾಯವಿಕ್ರಮ ನಿನ್ನ । ತೋಯಜಾಸ್ಯದಿ ಮಸಗೆ ರೌದ್ರ ॥ ೧ ॥ ಸಾಗರಪರೀತ ನೆಲ । ದಾಗರುವ ಕ್ಷತ್ರಕುಲ । ವೀಗ ನಿನ್ನಾಜ್ಞೆಗೆರಡೆಣಿಸಿ ॥ ಸಾಗಿಸದೆ ಕಾಣಿಕೆಯ । ಕೂಗುವುದೆ ಹಮ್ಮೇರಿ । ಬೇಗ ನುಡಿ ನುಡಿ ಬಂದ ಭವಣೆ ॥ ೨ ॥ ಕೇಳಯ್ಯ ದಮಘೋಷ । ಬಾಲ ಸಖಮೌಳಿಮಣಿ । ಫಾಲನೇತ್ರನ ದಯದಿ ನೃಪರು ॥ ಕೇಳಿ ನಡೆವರು ಮಾತ । ಪೇಳಲೇನೊಮಗಿರ್ಪ । ಮೂಲಸಂಗತಿಯ ಚಿತ್ತೈಸು ॥ ೩ ॥ ಯಾದವಾಭ್ರದ್ಯುಮಣಿ । ಯಾದ ಕಂಸನ ರಾಮ । ಮಾಧವರೆನಿಪ್ಪ ಗೋವಳರು ॥ ಕಾದಿ ಮಡುಹಿದ ರಂತೆ । ವೈಧವ್ಯವಣುಗೆಯರ । ಬಾಧಿಸಿದರೆನಗೆ ದೂರಿದರು ॥ ೪ ॥ ಕುರಿಗಳಂತಿಹ ಯಾದ । ವರಿಗಿನಿತು ಬಲುಹಾಗೆ । ಧೊರೆಗಳಾವಿರ್ದು

ಫಲವೇನು ॥ ಮುರಿಯಬೇಕೆಂದವರ । ಕರೆಸಿದೆನು ನಿನ್ನ ಮನ । ದಿರವ ತಿಳಿಸೆನಲೆಂದನವನು ॥ ೫ ॥

### ರಾಗ ಭೈರವಿ, ಏಕತಾಳ.

ಗೋವಳರೇಂ ಮಡುಹಿದರೇ । ಮಥು । ರಾವಲ್ಲಭನಸುಮರ್ಥರೇ ॥ ಈ ವಿಧ ಯಾದವರೆಸಗೆ । ಬದ । ಲಾವುದು ದುರ್ಯಶವೆಮಗೆ ॥ ೧ ॥ ಅಂಜದಿರಂಜದಿರರಸ । ರವಿ । ಯಂ ಜರೆವುದೆ ಬಲು ತಮಸ ॥ ನಂಜುಗೊರಲ ಬರಲಿಂದೆ । ರಿಪು । ಭಂಜನವೆಸಗುವೆ ಬಿಡದೆ ॥ ೨ ॥ ವೀಳೆಯವನು ಕೊಡು ಧುರಕೆ । ಯದು । ಜಾಲದೊಡನೆ ತಡವೇಕೆ ॥ ಬೀಳಹೊಡೆದು ಹರಿ ಬಲರ । ಬಹೆ । ವೇಳು ಕರೆಸು ಭೂವರರ ॥ ೩ ॥

### ಭಾಮಿನಿ.

ಪ್ರೌಢವಿಪತಿ ಕೇಳಿಂತು ಚೇದಿಪ । ನುಡಿಯೆ ಹಿಗ್ಗಿ ಗಿರಿವ್ರಜಸುತ್ರಾ । ಪಡೆಯನಿರದಿಪ್ಪತ್ತಮೂರಕ್ಷೋಹಿಣಿಯನಧಟ ॥ ಬಿಡದೆ ಕೂಡಿಸಿ ಯಾದವರ ಮಂ । ಗಡವ ನಿರ್ಮೂಲಿಸಲು ಶರನಿಧಿ । ಗಡಿಯ ಮಿಕ್ಕೈತಹವೊಲೈದಿದ ಮಧುರೆಗಿದಿರಾಗಿ ॥ ೧ ॥

### ರಾಗ ಭೈರವಿ, ತ್ರಿವುಡೆತಾಳ.

ನಡೆದುದಾಗ । ಮಧುರೆಗೆ । ಪಡೆಯು ಬೇಗ ॥ ಪಲ್ಲ ॥ ಅಡಿಯಿಡುವ ಹತಿಗಿಳೆ ನಡುಗೆ ಕಂ । ಗೆಡಲು ದೆಸೆ ಧೂಳಿಯೊಳು ಲಗ್ಗೆಯ । ಗಡಬಡೆಗೆ ರವಿ ರಥ ತುರಗ ಗತಿ । ಗೆಡೆ ಸುಚಾಮರ ಸಿಂಧ ಸೀಗುರಿ । ಕೊಡೆಗಳಲಿ ನಡೆವಖಿಳ ಪೃಥ್ವಿಪ । ಗಡಣ ಸಹಿತಲೆ ಚೈದ್ಯ ಮಾಗಧ । ರಡಸಿ ಕೋಟೆಯ ಮುತ್ತಿದರು ಭೋ । ರಿಡುವ ಭೇರೀ ಪಟಹ ರಭಸದಿ ॥ ನಡೆದು ॥ ೧ ॥ ಕನಕತೋರಣ ಹರ್ಮ್ಯ ಕೃತ್ರಿಮ । ವನವ ಮುರಿದು ಭಟಾಳಿ ಸಿಂಹ । ಧ್ವನಿಯನೆಸಗಲು ಮಗಧಪತಿಯ । ಪ್ಪಣೆಯೊಳತಿಬಲ ದಂತವಕ್ರನು । ಜನಪ ಸಾಲ್ವ ವಿಡೂರಥಾದಿಗ । ಳಿನದೆಸೆಯ ಪೌಂಡ್ರಕ ವಿರಾಟರು । ಕನಲಿ ಬಾಹ್ಲಿಕ ಮುಖ್ಯರಾ ತೆಂ ।

ಕಣ ದೆಸೆಯ ಮುತ್ತಿದರು ಬಿಡದೆ॥ ನಡೆದು ॥ ೨ ॥ ಶಲ್ಯ ಭೂರಿಶ್ರವ ಯುಧಾಮ । ನ್ಯೂಲ್ಲಸಿತ ಬೃಹಕ್ಷತ್ರ ಶಬರರ । ವಲ್ಲಭನೆನಿಪ್ಪೇಕಲವ್ಯಕ । ರಿಲ್ಲ ಪಡುವಲೊಳುತ್ತರದಿ ರಣ । ಮಲ್ಲ ಚೈದ್ಯ ಕಳಿಂಗ ಸಾಹಸ । ವುಳ್ಳ ಸೈಂಧವ ಶಕುನಿ ಮುಖ್ಯರು । ಬಲ್ಲಿದರು ವರ ಸೋಮದತ್ತಕ । ರಲ್ಲಿ ಮಾಗಧ ಸಹಿತ ಮುತ್ತಿದ । ರೇನನೆಂಬೆ॥ ನಡೆದು ॥ ೩ ॥

### ಕಂದಪದ್ಯ.

ಕ್ಷೋಣಿಪ ಕೇಳೀ ತೆರನಂ । ಕಾಣುತಲಾ ಪೊಳಲ ಕಾಪಿನವರತಿ ಭರದಿಂ ॥ ದಾನವಹರನೆಡೆಗೈದುತ । ಮಾಣದೆ ಪದಕೆರಗಿ ಬಿನ್ನವಿಸಿದರ್ ಹದನಂ ॥ ೧ ॥

### ರಾಗ ಸಾರಂಗ, ಅಷ್ಟತಾಳ.

ಪಾಲಿಸು ಶ್ರೀಗೋಪಾಲ । ವೃಂದಾವನ । ಲೋಲ ಕೃಪಾಲವಾಲ॥ ಲಾಲಿಪುದೆಮ್ಮ ಸು । ಶೀಲ ಬಿನ್ನಪವ ಭೂ । ಲೋಲ ಮಗಧನೀಗ । ಕಾಳೆಗಕೈತಂದ ॥ ೧ ॥ ಕಂಸನ ಕೊಂದವನ । ತೋರೆನ್ನುತ । ತ್ರಿಂಶದ್ಧರೇಶಜನ ॥ ಧ್ವಂಸಗೈವೆವು ಯದು । ವಂಶವನೆನುತಸು । ರಾಂಶ ಬೊಬ್ಬಿರಿದು ನಿ । ಸ್ತ್ರಿಂಶವ ಜಡಿವುದು ॥ ೨ ॥ ಕೋಟಿಯ ನಾಲ್ದಿಕ್ಕಿನ । ದ್ವಾರಕೆ ನಾಲ್ಕು । ಕೂಟದಿ ಬಂದರಿನ್ನಾ ॥ ಘೋಟಕ ಪದಚರ । ಮಿಾಟಾದ ಕರಿ ರಥ । ಕೋಟಲೆಗೈವವೀ । ಮಾಟ ನಿಲ್ಲಿಸು ದೇವ ॥ ೩ ॥

### ಭಾಮಿನಿ.

ಧರಣಿಪತಿ ಕೇಳಿಂತು ಪೇಳಿದ । ಚರರಿಗಭಯವನಿತ್ತು ಲಕ್ಷ್ಮೀ । ವರನು ಮನದಲಿ ನಸುನಗುತ ಯೋಚಿಸಿದ ತನ್ನೊಳಗೆ ॥ ಹರುಷವಾದುದು ಮದ್ದುವಳ್ಳಿಯು । ನರಸುತಿಹ ಮಾನವಗೆ ತಾನೇ । ಚರಣ ಕೆಡಗಿದೊಲೊದಗಿ ಬಂತೆಂದೆನುತಲಿಂತೆಂದ ॥ ೧ ॥

### ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಬಂದನೇ ಸಮಯಕ್ಕೆ ಮಗಧನು । ತಂದನೇ ತಾನಾಗಿ ಕಲಹವ । ಚಂದವಾಯಿತು ಭೂಮಿಭಾರವ । ಕುಂದಿಸಲ್ಕೆ ॥ ೧ ॥ ಎಲ್ಲರಂದದೊ

ಳಿವನ ಮೊದಲೇ। ಕೊಲ್ಲಲಾಗದು ದುರ್ಮದಾಂಧರ। ವಲ್ಲಭನಲಾ ಮಗಧನೀತನ । ಭುಲ್ಲವಣಿಗೆ ॥ ೨ ॥ ಕುಂಭಿನಿಯೊಳಿಹ ಭೂಭುಜರ ನಿಕು । ರುಂಬವೈತಂದಪುದು ನಿಲ್ಲದೆ । ಬೆಂಬಲಕೆ ಬರೆ ಕೊಂದು ಯಮಪುರ । ತುಂಬಲಕ್ಕು ॥ ೩ ॥ ದುರಿತವಿದರಿಂದಿಲ್ಲ ಸುಜನರ। ಪೊರೆವುದೇ ಕರ್ತವ್ಯವೆನಗೆಂ । ದರಿತು ಕರುಣಾಶರಧಿಯಗ್ರಜ । ಗೊರೆದ ಬಂದು ॥ ೪ ॥

## ರಾಗ ಕೇತಾರಗೌಳ, ಝಂಪೆತಾಳ.

ಅಣ್ಣ ಲಾಲಿಪುದು ನುಡಿಯ । ಮಾತುಳನ । ಮಣ್ಣ ಕೂಡಿಸಿದ ಹಗೆಯ ॥ ಕನ್ನೆಯರು ದೂರೆ ಕೇಳಿ । ಬಂದಿರ್ಪ । ನನ್ನೆಯದ ಮಗಧ ಕೆರಳಿ ॥ ೧ ॥ ಧರೆಯ ಬಾಹುಜರೆಲ್ಲರ । ನೆರಹಿರ್ಪ । ತರಿಯಲೆಮ್ಮನು ದುರ್ಧರ॥ ಪೊರೆವುದೆಂತೀ ಮಧುರೆಯ । ಪೇಳೆನ । ಲ್ಕರುಹಿದ ಪ್ರಲಂಬ ಪಗೆಯ ॥ ೨ ॥ ಬಂದುದೇ ಲೇಸು ತಮ್ಮ । ಭೂವಿನಾಶ । ವೃಂದಕೆವೆಮ್ಮ ಕಮಮ ॥ ಮಂದೆ ಮಾರಿಯ ಗುಡಿಯನು । ಪೊಕ್ಕಂತೆ । ಕೊಂದು ದಿಗುಬಲಿಗೊಡುವೆನು ॥ ೩ ॥ ಮಾವನನು ಕೊಂದ ಹಗೆಗೆ । ಬಂದಡಿ । ನ್ನಾವಿಗಡ ಮಾಗಧಂಗೆ ॥ ಸಾವಲ್ಲದುಂಟೆ ಬೇರೆ । ಪಥ ಯಮನ । ಠಾವ ತೋರಿಸುವೆ ಮಝರೆ ॥ ೪ ॥ ಅದಕಾಗಿ ಯದುಬಲವನು । ನೆರಹೀಗ । ಬದಲಿಣಿಸದಧಮರನ್ನು ॥ ಕದನದೊಳು ಹೊಡೆದು ಜಯವ । ತರುವ ಪೇಳ್ । ಮುದದಿ ಮುಂದಣ ಕಜ್ಜವ ॥ ೫ ॥

## ವಾರ್ಧಿಕ್ಯ.

ಇನಿತು ಮಾತಾಡುತಿರಲಭ್ರದಿಂದುಲ್ಕೆಯೊಲ್ । ಕನಕರಥ ಯುಗ ನಿಖಿಲ ಶಸ್ತ್ರಾಸ್ತ್ರಗಳು ಸೂತ । ರಿನಸುಪ್ರಭೆಯೊಳಚ್ಯುತನ ಚಕ್ರ ಗದೆ ಖಡ್ಗ ಶಾರ್ಙ್ಗವಕ್ಷಯನಿಷಂಗ॥ ವಿನುತ ಸುಗ್ರೀವ ಸೈನ್ಯಕ ಬಲಾಹಕ ಮೇಘೊ। ಡನೆ ಮೇಘಪುಷ್ಪಕಗಳೆಂಬಶ್ವಗಳು ಸಾಲ್ಕು। ಗಣನೆಗಳವೆನಿಸಿ ರಾಮಗೆ ಮುಸಲ ಹಲಗಳುಂ ಧರೆಗಿಳಿಯೆ ಹರಿ ನುಡಿದನು ॥ ೧ ॥

ರಾಗ ಸೌರಾಷ್ಟ್ರ, ಅಷ್ಟತಾಳ.

ಲೀಲೆಯಿಂ ಯೋಚಿಸೀ। ಕಾಲೋಚಿತ ಕ್ರಮ। ವಣ್ಣದೇವ॥ ಸುರ। ಜಾಲವಟ್ಟಿರುವ ಶ। ಸ್ತ್ರಾಳಿಯ ನೋಡಿದೆ। ಯಣ್ಣದೇವ॥೧॥ ಆಡಲೇನೊದಗಿದೆ। ಕೇಡು ನಮ್ಮವರಿಗೆ। ಅಣ್ಣದೇವ॥ ಬಲ। ಕೂಡಿಪೆ ಸುತ್ತ ಕೈ। ಮಾಡೀ ಕೈದುಗಳಿಂದ। ಅಣ್ಣದೇವ॥೨॥ ಜನನಹೀನರು ನಾವ। ವನಿಗಿಳಿದಿಹ ಕಾರ್ಯ। ವಣ್ಣದೇವ॥ ಸಾಧು। ಜನ ಸುರ ಜನರ ರ। ಕ್ಷಣ ಮುಖ್ಯ ಬೇಗ ಮಾ। ಡಣ್ಣದೇವ॥೩॥

ಭಾಮಿನಿ.

ಏಕೆ ತಮ್ಮ ವಿಳಂಬ ಡಂಗುರ। ಹಾಕಿಸೀ ಕ್ಷಣ ಚಾತುರಂಗವು। ನಾಕು ಬಾಗಿಲಿಗಿರದೆ ನಡೆಯಲಿ ವೈರಿಗಳ ಸದೆದು॥ ಶಾಕಿನಿಯರಿಂ ಗೌತಣಂಗಳ। ನಾ ಕೊಡದೆ ಬಿಡೆ ಹರನೆ ತಡೆಯಲಿ। ನಾಕಿಗಳು ಪರಿಕಿಸಲಿ ಮದ್ಭುಜವಿಕ್ರಮವನೆಂದ॥೧॥

ರಾಗ ಮಾರವಿ, ಏಕತಾಳ.

ಎನಲು ರಮಾಧವ। ಕನಕರಥವನೇ। ರ್ದನುವರಕಾ ಯದು। ಘನಬಲದೊಳ್ ಶ। ಕ್ರನ ದೆಸೆಗೆ ಸುಧಾ। ಮನ ಮೇಣ್ ಕೃತವ। ರ್ಮನನುದ್ಧವ ಸಹಿ। ತನಘರನಟ್ಟುತ॥ ಬಂದನಾಗ॥೧॥ ಪೃಥು ವಿಪೃಥರ ಯದು। ಪತಿಯು ಪ್ರಸೇನನ। ಪಿತೃವರಕಾಷ್ಠೆಗೆ। ಅತಿಬಲ ಗಾಂದಿನಿ। ಸುತ ಸಾತ್ಯಕಿ ಗದ। ರತಿರಥರನ್ನ। ಪ್ರತಿದಿಕ್ಕಿಗೆ ಕಳು। ಹುತ ಸಂಗರಕೆ॥ ಬಂದನಾಗ॥೨॥ ಉತ್ತರದ್ವಾರಕೆ। ಮತ್ತೆ ಬಲನ ಪುರು। ಷೋತ್ತಮ ತಾ ಕೂ। ಡುತ್ತಲಮಿತ್ರರ। ವೊತ್ತವ ಕೆಡಹು। ತ್ತೊತ್ತಿದರಾ ಕ್ಷಣ। ತಳ್ತುದು ಮಧುರೆಯ। ಸುತ್ತಲು ಸಮರ॥ ಬಂದನಾಗ॥೩॥

ವಾರ್ಧಕ್ಯ.

ನೆರೆದುದಾ ಯುದ್ಧಮಂ ನೋಡಲಂಬರದೊಳಗೆ। ಸುರ ಸಿದ್ಧ ಗಂಧರ್ವ ಯಕ್ಷ ಕಿಂಪುರುಷ ಕಿ। ನ್ನರ ಗರುಡ ಮನು ಮುನಿಗಳೊಂ

ದೆಸೆಗೆ ಸಂಗರದಿ ಧೃತಿಗೆಡದೆ ಕಾದಿ ಮಡಿದ ॥ ಧುರಪರಾಕ್ರಮಿಗಳಂ ವರಿಸಲೆಂದಪ್ಸರೆಯು। ರರಳ ಸರವಂ ಕೈಯ್ಯೊಳಾಂತು ಮತ್ತೊಂದೆಸೆಗೆ। ಗಿರಿಧರನ ಕೀರ್ತಿಸುತ ದಿಕ್ಪತಿಗಳೊಡನೆ ವಿಬುಧೇಶ್ವರಂ ನಭದೊಳಿರ್ದ ॥ ೧ ॥

ಭಾಮಿನಿ.

ಆದುದಿತ್ತಲು ಬಳಿಕ ನಾಲ್ವರು । ಯಾದವೋತ್ತಮ ಭಟರಿಗಷ್ಟ ಧ। ರಾಧಿಪರೊಳಾಹವವು ಬಾಗಿಲು ಮೂರರಲಿ ಬಿಡದೆ ॥ ಕಾದಿದರು ನೃಪರಸ್ತ್ರಘಾತಿಗ । ಭೇದಿತಾಂಗರು ವಿಷ್ಣುಭಕ್ತರು । ಯಾದಸಾಂಪತಿದಿಶೆಯೊಳಘಟಿತವಾಯ್ತು ಸಂಗ್ರಾಮ ॥ ೧ ॥

ರಾಗ ಶಂಕರಾಭರಣ, ಮಟ್ಟೆತಾಳ.

ಧರಣಿಪಾಲ ಕೇಳು ಮುಂದು। ವರಿದುವುಭಯ ಬಲವು ಸೆಣಸೆ। ಪರಿಯೆ ರಕುತ ಪೊನಲು ಪೆಣನ । ಗಿರಿಯು ಬೀಳಲು ॥ ಹರಿಯ ಮನದಿ ಭಜಿಸಿ ಯಾದ। ವರು ನಿಶಾತ ಶರಗಳಿಂದ। ದುರುಳ ಪಡೆಯ ಬೀಳಗೆಡಹೆ। ಪರಿಕಿಸುತ್ತಲಿ ॥ ೧ ॥ ಬೇಡರೊಡೆಯನೇಕಲವ್ಯ। ಓಡುತಿಹರ ಜರೆದು ನಿಲಿಸಿ । ದೂಡಿ ರಥವ ಮುಂದೆ ತಿರುವ । ತೀಡಿ ಬಾಣವ॥ ಗಾಢದಿಂದಲೆಚ್ಚು ಘಾಸಿ। ಮಾಡೆ ಯದುಬಲವ ಶಿನೇಯ। ಕೂಡೆ ರಥವ ಚಾಚಿ ಶಬರ। ನೋಡಿ ನುಡಿದನು ॥ ೨ ॥

ರಾಗ ಭೈರವಿ, ಅಷ್ಟತಾಳ.

ಆರು ನೀನೆಲೊ ಹುಡುಗ। ನಿನ್ನಯ ತಂದೆ। ಯಾರು ಪೇಳೆಲೊ ಥಡಿಗ ॥ ಸಾರತ್ತ ಗೋಪಕು। ಮಾರರ ನುಡಿಗೇಳಿ। ಮಾರಬೇಡೆಲೊ ತಲೆಯ ॥ ೧ ॥ ಖೂಳ ಗೋವಳನೆನ್ನಲು। ರೌರವದೊಳು। ಬೀಳುವೆ ಲೋಕಗಳು ॥ ಕೇಳಾವನೊಲುಮೆಯಿಂ। ಬಾಳಿಹವಾ ಹರಿ। ಯಾಳು ಸಾತ್ಯಕಿಯಹೆನು ॥ ೨ ॥ ಕುರುಬರು ಬಿಜ್ಜಿರುವ । ದಾರಿಯ ಕಲ್ಲ। ಹರಳ ಮಾಣಿಕವೆನ್ನುವ ॥ ತೆರದೊಳಾ ಕೃಷ್ಣನ। ಪರಬೊಮ್ಮವೆನಿಸಿಕೆ । ಟ್ವರಿ ಯಾದವರು ನಿಶ್ಚಯ ॥ ೩ ॥ ಅಂತಕನಾಳುಗಳು ।

ಕೊಂಡೊಯ್ಯೆ ಜ। ನ್ಮಾಂತರ ಸುಕೃತದೊಳು ॥ ಬಂತೆನೆ ಸಾವು ಭ। ವಾಂತವಾಗುವುದವ। ನಂತಸ್ಥವೇನರಿವೆ ॥ ೪ ॥ ಕೊಂಡು ದಾನವ ರಸುವ। ಬಾಲ್ಯದಿ ಗರ್ವ। ಗೊಂಡು ಕಂಸನ ಕೊಂದವ ॥ ಮಂಡೆಯ ಬಲವ ಕ। ಲ್ಗಂಡಿಗೆ ತೋರಿದ। ಪುಂಡುತನವ ನಾ ಬಲ್ಲೆ ॥ ೫ ॥ ಮಾವನ ತಾನೆ ಕೊಂದ। ಅಟ್ಟಹ ನಿನ್ನ। ಜೀವಗೊಳ್ಳಲು ಗೋವಿಂದ॥ ಕೇವಲ್ಯ ಖಳರ್ಗೆ। ಸಾವಿತ್ತು ಸುಜನರ। ಕಾವ ಶ್ರೀಹರಿ ಮುಕುಂದ ॥ ೬ ॥

ರಾಗ ಮಾರವಿ, ಏಕತಾಳ.

ನುಡಿಯನು ಕೇಳುತ। ತಡೆಯದೆ ವನಚರ। ರೊಡೆಯನು ಮುಳಿದೆಂದ ॥ ಸಡಗರವನು ಬಿಡು। ತೊಡು ಕೂರ್ಗಣೆಗಳ। ಫಡ ಫಡಯೆನುತೆಚ್ಚ ॥ ೧ ॥ ತರಿದಾಶುಗಗಳ। ನೊರೆದನು ಸಾತ್ಯಕಿ। ಪರಿಪರಿ ಮೃಗಗಳನು ॥ ಅರಸುತ ಕಾಡೊಳು। ತಿರುಗುವ ಬೇಡಗೆ। ಧುರವೇಕೆಂದೆಚ್ಚ ॥ ೨ ॥ ಖಂಡಿಸಿ ಶಬರನು। ಕುಂಡಲಿಶರವನು। ಕೊಂಡೆಸೆಯಲು ಕಡಿದ ॥ ಅಂಡಜನಿಂದದ। ಕಂಡಗ್ನಿಯ ಬಿಡೆ। ತುಂಡರಿಸಿದ ವರುಣ ॥ ೩ ॥ ರೋಷದಿ ತಿಮಿರಾ। ದ್ರೀಷುಗಳನು ಬಿಡ। ಲಾ ಶಬರನು ಮುಳಿದು ॥ ಶ್ರೀಶನ ದಾಸ ದಿ। ನೇಶ ಪವಿಗಳಿಂ। ನಾಶವೆಸಗೆ ಕಂಡು ॥ ೪ ॥ ತವೆ ಕೋಪದಿ ಬಿಡೆ। ಕವಲಂಬನು ಕೋ। ಲಿವನೆಸುವನಿತರೊಳು ॥ ಕವಿಪಾ ಸತ್ಯಕ। ಕುವರನ ಕೋದಂ। ಡವ ಮುರಿದಡೆ ತಾನು ॥ ೫ ॥ ಧನು ಮತ್ತೊಂದನು। ಶಿನಿಸುತ ಕೊಂಡಹಿ। ತನ ರಥ ಹಯಗಳನು ॥ ಡೊಣೆಬಿಲ್ ಸವಗಗ। ಳನು ಭೇದಿಸಿ ವಿರ। ಥನ ಮಾಡಲ್ಕವನು ॥ ೬ ॥

ಕಂದಪದ್ಯ.

ಕೈರಾತಾಧಿಪ ಲಜ್ಜಿಸಿ। ಜಾರಲು ಹಿಂದಕೆ ಶಿನೇಯನಥಟಂ ಕಂಡಾ ॥ ಭೂರಿಶ್ರವ ಚಾಪಕೆ ತೆ। ಬ್ಬೇರಿಸಿ ಕಣೆಮಳೆಗರೆವುತಲಡ ಹಾಯ್ದೆಂದಂ ॥ ೧ ॥

### ರಾಗ ಪಂಚಗತಿ, ಮಟ್ಟೆತಾಳ.

ಘಡಘಡೆಲವೊ ಸತ್ಯಕಾಖ್ಯ। ಹುಡುಗ ನಿಲ್ಲೆಲಾ । ಅಡವಿಚರರ ಪತಿಯು ಗೆಲಿದ। ಕಡುಹ ತೋರೆಲಾ॥ ಹೊಡೆದು ನಿನ್ನ ಭೂತಗಣಕೆ। ಕೊಡುವೆನೌತಣ। ಕೆಡದೆ ಬಾಗಿಲನ್ನು ಬಿಟ್ಟು। ನಡೆ ತತುಕ್ಷಣ॥ ೧॥ ದುರುಳ ಶಬರನಿರವ ನೋಡಿ । ಬರುವುದೊಳ್ಳಿತು । ಧುರಕೆ ಜವನ ಪುರದ ದ್ವಾರ । ತೆರೆದುದಾಯಿತು ॥ ತ್ವರಿತದಿಂದ ಕಳುಹಿದಪೆನು। ಶರದಿ ನೋಡಿಕೊ। ಬರಿದೆ ಗಳಹಿ ಹರಣ ಬಿಡುವ। ತೆರನಿದೇತಕೊ॥ ॥ ೨॥ ಎಂದ ಮಾತ ಕೇಳಿ ಕೋಪ। ದಿಂದ ನುಡಿದನು। ಬಂದುದಂತ್ಯ ಯಾದವರ್ಗೆ। ಇಂದು ತಿಳಿ ನೀನು॥ ಸೊಂದಿಗೋಡಗಗಳು ಕರಿಯ। ವೃಂದಕೆರಗಿದ। ಒಂದು ರೀತಿಯಂತೆ ಗೆಯ್ಯೆ। ಬಂದ ಮಾಗಧ॥ ೩॥ ಎಲವೊ ಹುಲುನೃಪಾಲ ಗಜದ। ಬಳಗದುರುಬೆಯ ॥ ಗಳಿಗೆಯರ್ಧ ದೊಳು ಮೃಗೇಂದ್ರ। ನಿಲಿಪ ಕೇಳಯ್ಯ ॥ ಖಳನೃಪಾಳಿದಂತಿಸಿಂಹ। ಜಲಜನಾಭನು। ತಿಳಿದು ರಣಕೆ ನಿಲ್ಲು ಕೊಂದು। ಕಳೆವೆ ನಿನ್ನನು॥ ೪॥ ಅನಕ ಭೂರಿಶ್ರವನು ಮುಳಿದು। ಕಣೆಯ ಮಳೆಯನು। ಅನಘನೆದೆಗೆ ಕರೆಯೆ ತರಿದು । ಧನುವ ಕಡಿದನು ॥ ಬಿನುಗೆ ನಿಲ್ಲೆನುತ್ತ ಸಾತ್ಯ। ಕನು ಕಳಂಬವ। ಎಣಿಕೆಯಿಲ್ಲದೆಸಲು ಧರೆಗೆ। ಜನಪನೊರಗಿದ॥ ೫॥

### ವಾರ್ಧಿಕ್ಯ.

ಧರಣಿಪತಿ ಕೇಳಿಂತು ವರ ಸತ್ರಕಾತ್ಮಜಂ । ಧುರವಿಜಯ ರೀರ್ವರಂ ಜೈಸಲುಳಿದವರ ಯುದು। ವರರು ಬಡಿದಟ್ಟುತಂಬುರುಹ ನಾಭನ ದಯುದಿ ವಿಜಯಾಂಗನೆಯು ಪಡೆಯುಲು॥ ಶರಹತಿಗೆ ಮಡಿದು ಬಿದ್ದಾನೆ ಹಯು ಕಾಲ್ಬಲವ । ನರಿ ಹದ್ದು ಕಾಗೆ ಶಾಕಿನಿ ಡಾಕಿನಿಯ ಕ್ರೈದೆ । ಹರುಷದಿಂ ಮೆದ್ದು ಕೆನ್ನೀರ್ಗುಡಿದು ಕುಣಿಯುಲಾ ಕಣ ಭಯುಂಕರವಾದುದು ॥ ೧ ॥

### ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಚಿತ್ತವಿಸು ಭೂರಮಣ ಕಾಳೆಗ । ವಿತ್ತಲಿಂತಿರಲಾಬೆಯೊಳು ಪುರ। ದುತ್ತರ ದ್ವಾರದಿ ಸಪತ್ನರ। ಮೊತ್ತವನ್ನು॥ ೧॥ ಮಾರಿಗುಣ

ಬಡಿಸಲ್ಕೆ ಹೊರಟಸು । ರಾರಿ ರಾಮರು ದಾಟಿ ಬಾಗಿಲ । ಪೈರಿಜನ ದೆದೆ ಬಿರಿಯೆ ಶಂಖವ । ಪೂರವಿಸುತ ॥ ೨ ॥ ಸಾರಥಿಗೆ ಹರಿ ನುಡಿದ ನಡೆಸಾ । ವೀರ ಮಾಗಧ ಚೈದ್ಯರಂತಿಕ । ಕೀ ರಥವ ಬಿರ್ದಿನರು ನಮಗವ । ರಾರಯಲ್ಕೆ ॥ ೩ ॥ ಬಡಿಸುವೆನು ಬಾಣಾವಳಿಯ ಬಿಸಿ । ಯಡಿಗೆಗಳನಂತಕನ ಪುರದಲಿ । ಕೊಡಿಸುವೆನು ಬೀಡಿಗೆಯ ಬೇಗನೆ । ಹೊಡೆ ಕುದುರೆಯ ॥ ೪ ॥ ಎನೆ ಹಸಾದವೆನುತ್ತ ಸಾರಥಿ । ಮನಕೆ ಮುನ್ನವೆ ರಥವ ಹರಿಸಲು । ಜನಪರಲ್ಲಿಗೆ ಶಂಖವೂದಿದ । ವನಜ ನೇತ್ರ ॥ ೫ ॥

ಭಾಮಿನಿ.

ಹೊಕ್ಕರಸುರಾರಾತಿಗಳು ಪರ । ವೊಕ್ಕಳವ ನಿಜ ಧನುವನೊದರಿಸ । ಲಿಕ್ಕೆಲದ ಬಲಜಲಧಿ ತೊಲಗಿತು ಸುಭಟರುರವಣೆಗೆ ॥ ಮಿಕ್ಕಬರೆ ಮಗಧೇಂದ್ರನೀಕ್ಷಿಸಿ । ನಕ್ಕನಿವರೇ ರಾಮಕೃಷ್ಣರು । ಸೊಕ್ಕಿ ಬಂದರೆಯೆನುತ ಕೃಷ್ಣನ ಮೂದಲಿಸಿ ನುಡಿದ ॥ ೧ ॥

ರಾಗ ಕಾಂಬೋಧಿ, ಝಂಪೆತಾಳ.

ಧಿಟ್ಟ ನೀನೇನೆಲವೊ । ಕಿಟ್ಟನೆಂಬವ ನಮ್ಮ । ಪುಟ್ಟ ಮಗಳಂದಿರೆರೆಯನನು ॥ ಕುಟ್ಟಿ ಕಳೆದೆಯದೇಕೆ । ಬಟ್ಟೆಯೇನೆಲವೊ ಪರ । ಪುಟ್ಟ ನಿನಗಿನ್ನು ಬದುಕುವೊಡೆ ॥ ೧ ॥ ನುಡಿಯಲಂಜುವೆನಜ್ಜ । ಮಡುಹಿದೆನು ಮಾವನನು । ಬಿಡಿಸೆ ಹೆತ್ತವರ ಬಂಧನವ ॥ ಕಡುವಿರೋಧದಿ ನೀವು । ನಡೆತರಲು ಪಥವೇನು । ಕೊಡುವೆನಾಪನಿತು ಕಾಳಿಗವ ॥ ೨ ॥ ಸೆಣಸುವೆಯ ಧಣುಧಣುರೆ । ನಿನಗಾರು ನಿಜವಾದ । ಜನಕರೀ ಶೌರಿ ನಂದರೊಳು ॥ ಜನಕರಿಬ್ಬರ ಪೊಲು ರ । ಸನೆಯೆರಡೆನಿಸಿ ನಮ್ಮ । ದಣಿಸಿದರೆ ಬಿಡೆ ಪಲಾಯನಕೆ ॥ ೩ ॥ ಹೆತ್ತಯ್ಯ ವಸುದೇವ । ಮತ್ತೆನ್ನ ಸಾಕಿದ ನಿ । ವೃತ್ತಿಯಿಲ್ಲದೆ ನಂದಗೋಪ ॥ ವೃತ್ಯುವಿನ ತೆರದೊಳು । ನ್ಮತ್ತ ಕಂಸನು ಕಷ್ಟ । ವಿತ್ತಡವರೇಂ ಗೆಯ್ಯಲಹುದು ॥ ೪ ॥ ಕೋಗಿಲೆಯು ಮರಿಯನ್ನು । ಕಾಗೆಯಿಕ್ಕೆಯೊಳಿಟ್ಟು । ಪೋಗುವಂದದಿ ಶೌರಿ

ನಿನ್ನ ॥ ಸಾಗಿ ಪಲ್ಲಟಿಸೆ ಕಾ । ರಾಗಾರ ಹೆಚ್ಚಲ್ಲ । ಹೇಗೆ ತಪ್ಪಿದನು ಭೋಜನೃಪ ॥ ೫ ॥ ಹಗೆಯೊಬ್ಬ ನಾನು ಮು । ನ್ನೊಗೆದಾರಣುಗರ ಸು । ಮ್ಮಗೆ ಕೊಂದು ತಾಯಿಗಿತ್ತನಲಾ ॥ ದುಗುಡವಂ ಮಾವನ ಬ । ಲಿಗೆ ಪಡೆದಳೇ ಜನನಿ । ಮಿಗೆ ಜೀವಕಧಿಕರಹ ಸುತರ ॥ ೬ ॥ ಶತ್ರು ಮುಂದುದಿಸಲಿಹ । ಕ್ಷೇತ್ರದೊಳಗೊಗೆದವರು । ಮಿತ್ರರಹರೇ ಮೊದಲೆ ಶೌರಿ ॥ ಪುತ್ರರನು ಕೊಟ್ಟಹ ಚ । ರಿತ್ರೆಯನು ನೀನರಿಯೆ । ಕ್ಷತ್ರಿಯಾಧಮನೆ ಕಡೆಸಾರು ॥ ೭ ॥ ಸ್ತ್ರೀಹತ್ಯವನು ತಡೆಯ । ಲೀ ಹದನ ಪಿತನೆಂದ । ತಾ ಹಸುಳೆಗಳ ಕೊಂದ ಬಂಧು ॥ ದ್ರೋಹಿ•ಗುರು ಗೋವಿಪ್ರ । ದ್ರೋಹಿಯಹ ಖಳ ಕಂಸ । ಬೇಹವನು ನಿನಗುತ್ತಮನಲಾ ॥ ॥ ೮ ॥ ಆರರಿಯರೆಲೊ ನಿನ್ನ । ಚಾರು ವೃತ್ತಗಳ ಬಡಿ । ವಾರ ಸಾಕೆಲವೊ ದನಗಾಹಿ ॥ ಜಾರ ನವನೀತ ದಧಿ । ಚೋರ ತೊಲತೊಲಗೆಂದು । ವೀರ ಮಾರ್ಬಲಕೆ ಕೈವೀಸೆ ॥ ೯ ॥

### ವಾರ್ಧಿಕ್ಯ.

ಗರುಡ ತಾಳಧ್ವಜದ ಕುರುಹ ಕಂಡಹಿತರ । ಬ್ಬರಿಸಿ ಕವಿತರೆ ರವಿಯ ಮುಸುಕುವಭ್ರಗಳಂತೆ । ಪರಿಭವಂ ಯದುವರರಿಗಾದುದಕಟಕಟೆನುತ ಪುರದ ಹರ್ಮ್ಯಾಗ್ರದಿಂದ ॥ ನಿರುಕಿಸುತ ಸುದತಿಯರು ಹಾಯೆನುತ್ತಿರೆ ಬಲೋ । ತ್ಕರವ ನಿಶಿತಾಸ್ತ್ರದಿಂ ಸಂಹರಿಸಿ ಶಂಖವಂ । ಭರದೊಳೂದಲು ಕೇಳಿ ಪೌರತತಿ ಮುದವಾಂತುದಮರಚಯ ಜಯವೆನ್ನಲು ॥ ೧ ॥

### ರಾಗ ಆಹೇರಿ, ಮಟ್ಟೆತಾಳ.

ಏನನೆಂಬೆ ಹರಿಯ ಸಾಹಸ । ಬಾಣವರ್ಷದಿಂದಲಹಿತ । ಕಾನನವನು ಸವರಿ ನಡೆದ । ನೇನನೆಂಬೆ ॥ ಪಲ್ಲ ॥ ಕಂಡು ಸೈನ್ಯವಧಿಕ ರೋಷ । ಗೊಂಡು ಗಣನೆಯಿಲ್ಲದಂತೆ । ಕಾಂಡಗಳನು ಸುರಿಸೆ ತನ್ನ । ತಂಡ ಹೊರಳೆ ನೋಡಿ ಕೆರಳಿ । ಪುಂಡರೀಕನೇತ್ರ ನಿಜ ಕೋ । ದಂಡ ಕೇರಿಸುತ್ತ ಶರವ । ದಿಂಡುರುಳ್ಚಿ ಮಾರ್ಬಲವನು । ಹಿಂಡಿಹಳಿದನಾಗ

ಭರದೊ । ಳೇನನೆಂಬೆ ॥ ೧ ॥ ಕರವು ಹರಿದು ಚರಣವುಡಿದು । ಕರುಳು ಸೂಸಿ ವರ ಪದಾತಿ । ಧರಣಿಗೊರಗಿತಾಗ ನಿಶಿತ । ಶರವಿಘಾತಿಗಶ್ವ ನಿಚಯ । ಹೊರಳೆ ಸೊಂಡಲುಡಿದು ಕರಿಗ । ಳುರುಳೆ ಜವನ ಪುರವು ನೆರೆಯೆ । ಬರತುದಾಗ ವೈರಿಜಲಧಿ । ಹರಿಕಳೆಂಬಕುಲನಿದಾಘ । ಕೇನನೆಂಬೆ ॥ ೨ ॥ ಧಾರುಣೀಶಕಟಕ ಬೆನ್ನ । ತೋರಿ ಗಾರುಗೆಟ್ಟು ಹಿಂದೆ । ಜಾರುತಿರಲು ಬಳಿಕ ದ್ವಾರ । ಮೂರ ಮುತ್ತಿಗೆಗಳು ತೆಗೆದು । ಸೇರಿತೊಂದು ಬಡಗದೆಸೆಯ । ತೋರು ತೋರು ಹರಿಯನೆನುತ । ವಿಾರಿ ಬರಲು ಮತ್ತೆ ಕೃಷ್ಣ । ನೇರಿಸಿದನು ತಿರುವಿಗಂಬ । ನೇನ ನೆಂಬೆ ॥ ೩ ॥

**ಭಾಮಿನಿ.**

ತುರಗತತಿಯೊಳು ಕೃಷ್ಣ ರಥಿಕರ । ನೆರವಿಮಧ್ಯದಿ ಕೃಷ್ಣ ಕರಿ ಘಟೆ । ಹೊರಳಿಯೊಳು ಕೃಷ್ಣಂ ಪದಾತಿಗಳೊಳಗೆ ಕೃಷ್ಣಮಯ ॥ ಇರಿದನೆಚ್ಚನು ಕೊಚ್ಚಿದನು ಸಂ । ಹರಿಸಿದನು ಪರಸೈನಿಕವ ಜವ । ಪುರಕೆ ಪಯಣವ ಮಾಡಿಸಿದನರೆ ನಿಮಿಷದೊಳು ಹರಿಯು ॥ ೧ ॥

**ವಾರ್ಧಿಕ್ಯ.**

ಲಾಲಿಸೈ ನೃಪತಿಲಕ ಕಂಗೆಟ್ಟು ರಿಪುಬಲಂ । ಕಾಲಂಗೆ ಸೂರೆ ಯಂ ಕೊಟ್ಟುದೋ ಮಗಧ ಶಿಶು । ಪಾಲರುಟ್ಟುದನುಳಿದು ಪಿಂದೆಗೆ ದರೋ ಎನುತ ಕಂಡ ದೆಸೆಗೋಡುತಿರಲು ॥ ಕೇಳಿ ಚೈದ್ಯಂ ಪೇತುಗರ ಬೈದು ಬಗುಳುತಿಹ । ನಾಲಿಗೆಯ ಸೀಳು ಸೀಳೆನಗಿದಿರೆ ರಣಕೆ ಸುರ । ಪಾಲಾದ್ಯರೆಂದೆನುತ ಹರಿರಥವನಡ್ಡೈಸಿ ನುಡಿಸಿದಂ ಕುಪಿತನಾಗಿ ॥ ೧ ॥

**ರಾಗ ಭೈರವಿ, ಏಕತಾಳ.**

ಎಲವೋ ಗೋಪಕುಮಾರ । ಸಾ । ಕೆಲೊ ಹುಲುಬಲಸಂಹಾರ ॥ ಗೆಲವೆಂಬಡವಿಕುಠಾರ । ಎ । ನ್ನೊಳು ನಿನ್ನಳವನು ತೋರ ॥ ೧ ॥ ಕುಶಲವೆ ಭಾವಂದಿರ್ಗೆ । ಇದು । ಪೊಸತು ಸಮಾಗಮವೆಮಗೆ ॥ ಒಸೆ ಬಹುಮಾನಿಸೆ ತಪ್ಪೆ । ಹೊಸ । ಮಸೆಯಂಬಿನೊಳುಪಚರಿಪೆ ॥

॥ ೨ ॥ ದನಗಾಹಿಗೆ ದೊರೆಗಳಲಿ । ನಂ । ಟನುವಪ್ಪುದೆ ಪ್ರಜದಲ್ಲಿ ॥
ಘನಬಲ ಕೇಶಿ ಬಕಾದಿ । ದಿತಿ । ತನುಜರ ವಧಿಸುತ ಬೆಳೆದಿ ॥ ೩ ॥
ವೊರೆವಿಡಿದಾಡಲು ಪಳಿವೆ । ದೈ । ತ್ಯರ ಕೊಲೆಗೆನ್ನೊಳು ಮುಳಿವೆ ॥
ದುರುಳರ ನಿನ್ನಂತಹರ । ನಾ । ತರಿದು ಕಳೆದೆ ಭೂಭಾರ ॥ ೪ ॥
ಕ್ಷೀರದಧಿಗಳನು ಸುಲಿದು । ದಯ । ದೋರದೆ ಮಾವನನಿರಿದು ॥
ತೋರಿದೆ ಸೌಜನ್ಯಗಳ । ಭೂ । ಭಾರಕರಾರೆಲೊ ಕಳ್ಳ ॥ ೫ ॥
ಮಾವನು ನಿನಗೆನ್ನಯ್ಯ । ನೀ । ನೇವಿಧ ಬಿಡಿಸಿದೆ ಸೆರೆಯ ॥ ಗೋ
ವಿಪ್ರ ಸುಬಾಂಧವರು । ಭೋ । ಜಾವನಿಪಗೆ ಹಗೆಯವರು ॥ ೬ ॥

ರಾಗ ಶಂಕರಾಭರಣ, ಮಟ್ಟೆತಾಳ.

ತೊಲಗು ಸಾಕು ಬಗುಳಬೇಡ । ಕೊಳಲ ದನಿಗೆ ಮರುಳುಗೊಂಡ । ಲಲನೆಯರೊಳು ನೆರೆದು ಗೋವು । ಗಳನು ಮೇಯಿಸಿ ॥ ಜೆಳೆದ ಚಪಳತನವು ಸಲ್ಲ । ಬಲುಹ ತೋರು ನಿನ್ನ ಭೂತ । ಬಳಗ ಕುಣಿಸಿಬಿಡುವೆ ಗರಳ । ಗಳನೆ ತಡೆಯಲಿ ॥ ೧ ॥ ಬಾಯ ಹೆಗ್ಗಳಿಕೆಯೊ ಭಟನಿ । ಕಾಯದುರವಣಿಕೆಯೊ ಫಡ ಪ । ಲಾಯನಕ್ಕೆ ದೊರಕದೆಡೆಯು । ತಾಯ ಬಸಿರೊಳು ॥ ಆಯತಿಕೆಯ ಪರಿಕಿಸೆಂದ । ಜೇಯನೆಚ್ಚು ಬೊಬ್ಬಿರಿಯೆ ಪ್ರಾ । ರಾಯ ಸತ್ತ್ವದಿಂದಲಾಗ । ಹಾಯೆನಲ್ಬಲ ॥ ॥ ೨ ॥ ಎಚ್ಚ ಶರವ ಕಡಿದು ಚೈದ್ಯ । ನುಚ್ಚರಿಸಿದ ಭಾಪು ಮಝುರೆ । ಮೆಚ್ಚಿದೆ ಕೈಚಳಕಕೆನುತ । ಲೆಚ್ಚ ಹಯವನು ॥ ಅಚ್ಚ ಮಸೆಯ ನಾಲ್ಕು ಶರದಿ । ಬಿಚ್ಚಲಿದೆಯ ನೋಯೆ ಸೂತ । ನಚ್ಯುತನನು ಹತ್ತರಿಂದ । ಹೆಚ್ಚಿ ಹೊಡೆದನು ॥ ೩ ॥ ಲೇಸು ಗೈದೆ ವೀರ ನೀನ । ಭ್ಯಾಸಿಯಹುದು ಧುರದಿ ಶರವಿ । ನ್ಯಾಸವೊಳ್ಳಿತೀಕ್ಷಿಸೆನ್ನ । ಕೌಶಲಂಗಳ ॥ ವೈಸಿರಿಯನೆನುತ್ತ ಮಾರ್ಗ । ಣಾಸನವನು ಮಿಡಿದು ದಾಮ । ಘೋಷಸಂಗಕೆಚ್ಚು ಬಾಣ । ಘಾಸಿಮಾಡಲು ॥ ೪ ॥ ಜಾರೆ ಹಿಂದೆ ಜೇದಿನಾಥ । ಭೂರಿಬಲವ ಕವಿಸಿ ತ್ರಿಂಶ । ದ್ಧಾರುಣೇಶನಿಕರ ತರುಬೆ । ವಾರಿಜಾಕ್ಷನು ॥ ತೇರ ಮುರಿದು ಧನುವ ಕಡಿದು । ಮೂರು ಮೂರು ಶರದಿ ಹೊಡೆಯ । ಲೋರೋರ್ವರಸರನ್ನು ವೈರಿ । ವಾರ ಬೆದರಿತು ॥ ೫ ॥

### ವಾರ್ಧಿಕ್ಯ.

ಕೆಟ್ಟೋಡಿದರ್ ಕೆಲರ್ ಸಂಗರಕೆ ಭಯದಿ ಬೆಂ। ಗೊಟ್ಟೋಡಿದರ್ ಕೆಲರ್ ಪಿಡಿದಸ್ತ್ರಶಸ್ತ್ರವ ಬಿ। ಸುಟ್ಟೋಡಿದರ್ ಕೆಲರ್ ಕಡಿವಡೆದುರುಳ್ದು ಬೆಟ್ಟಾಗಿರ್ದ ಪೆಣರಾಸಿಯ॥ ಮೆಟ್ಟೋಡಿದರ್ ಕೆಲರ್ ಸುರಿವ ಕಣೆಮಳೆಗೆ ಕಂ। ಗೆಟ್ಟೋಡಿದರ್ ಕೆಲರ್ ಪಥಗಾಣದಿರೆ ಮೊರೆಯ। ನಿಟ್ಟೋಡಿದರ್ ಕೆಲರ್ ಹರಿಯಂಬಿನುಗ್ರದಿಂ ಬಟ್ಟೆಬಯಲಾಗಿ ನೃಪರು ॥ ೧ ॥

### ಕಂದಪದ್ಯ.

ಇಂದುಕುಲಾಧಿಪ ಕೇಳು ಮು। ಕುಂದಂ ಭೂಪರ ದೆಸೆಗೆಡಿಸುತ ಸೂಱಿಯೊಳಂ ॥ ಸ್ಯಂದನವಂ ಹಾರಿಸಿ ಬಳಿ। ಸಂದಸ್ತ್ರವ ಸುರಿದುಸುರಿದ ಚೈದ್ಯನೊಳಾಗಳ್ ॥ ೧ ॥

### ರಾಗ ಕಾಂಬೋಧಿ, ತ್ವರಿತಝಂಪೆತಾಳ.

ನಿಲ್ಲು ನಿಲ್ಲೆಲೊ ಧರಣಿ। ವಲ್ಲಭರನಿದಿರಿಕ್ಕಿ। ಕಳ್ಳನಂತೈದುವೆಯ ಚೈದ್ಯ॥ ಬಿಲ್ಲ ತೊಡು ತೊಡು ನಿನ್ನ। ಪಲ್ಲ ಕಳಚುವೆನೀಗ। ಲಲ್ಲದಡೆ ಶರಚಾಪವಿಳುಹು ॥ ೧ ॥ ಏನನೊದರಿದೆ ಕುಹಕಿ । ತ್ರಾಣಶೂನ್ಯನೆ ಚೈದ್ಯ। ನಾನೆ ಕುರಿಗೆರಗಿ ಬದುಕುವುದೆ॥ ಕ್ಷೋಣಿಯೊಳು ಯಾದವರು ಹೀನ ದೊರೆತನರೆಮ್ಮ ಮಾನನಿಧಿಗಳಿಗೆ ಸರಿಯಹರೆ॥ ೨ ॥ ಯಾದವರ ಪಾತಿತ್ಯ । ವಾದರಿಸಿ ವರಿಸೆ ಮಮ । ಸೋದರತ್ತೆಯನು ಮಮ ಘೋಷ ॥ ಹೇ ಧೂರ್ತ ನೀ ಜನಿಸಿ । ಬೈದೆ ತಾಯ್ತನೆಯ ಕೆಡು। ಹಾಧಿದುಳಿದೆಲೊ ಕೃತಘ್ನಕನೆ॥ ೩ ॥ ದುಷ್ಟ ದುಶ್ಚರಿತ ನೀ। ಹುಟ್ಟಿ ನಿನ್ನನು ನಂಬಿ। ಕಷ್ಟಕೊಳಗಾಯ್ತು ಯದುವಂಶ॥ ಭ್ರಷ್ಟ ನಿನ್ನನು ಮೊದಲು । ಕುಟ್ಟಿ ಕೊಂದೆನ್ಮೊಳೊ । ಕ್ಕಟ್ಟ ಬಳಿಸುವೆ ಬಳಿಕ ನೋಡು॥ ೪ ॥ ತಿಳಿದೆ ಸರಿ ಮಾಗಧಂ। ಗಳಿಯನಾಗುತೆ ಕಂಸ। ಬಲುಬನ್ನವಿತ್ತ ಬಳಗಕ್ಕೆ ॥ ಕುಲವಿರೋಧಿಯನವನ । ಕಳೆದೆ ನಿಮ್ಮನು ತರಿದು । ಇಳೆಯ ಸುಜನರಿಗೆ ಸುಖವೀವೆ॥ ೫ ॥ ವೈರಿ ನೀನೊಬ್ಬನೆ

ವಿ । ಚಾರಿಸಲು ನಮಗಿಲ್ಲ । ವೈರ ಯಾದವರೊಳದರಿಂದ ॥ ಸ್ವೀಕರಿಸಿದವೀತನಕ । ತೋರುವೆನು ಕಡೆಗಾಲ । ವೀ ರಣಾಗ್ರದೊಳು ನೋಡೆಂದ ॥ ೬ ॥

ರಾಗ ಮಾರವಿ, ಏಕತಾಳ.

ತೋರಾದಡೆ ವಲ । ವೈರಿಮುಖಾಮರ । ವಾರವು ಪರಿಕಿಸಲಿ ॥ ಘೋರನೆ ಛಲವ ವಿ । ಚಾರಗಳೇತಕೆ । ಕೂರಸಿಗಳು ಬರಲಿ ॥ ೧ ॥ ತಲೆಗಾಯ್ವರ ಜೆಂ । ಬಲಕೀಗಳೆ ಕರೆ । ತಳುವದೆನುತ ಚೈದ್ಯ ॥ ಮುಳಿದೆಚ್ಚಡೆ ಮಸೆ । ದಲಗುಗಳನು ಪಥ । ದೊಳೆ ಕಡಿದ್ದಬ್ಜಾಕ್ಷ ॥ ೨ ॥ ಖಳ ನಿನ್ನಯ ಗಂ । ಟಲ ಮುರಿಯುವ ಜವ । ತಿಳಿ ನಾನೇ ಎನುತ ॥ ಪುಲುಗಣೆಗಳೊಳೇಂ । ಫಲ ಮಂತ್ರಾಸ್ತ್ರವ । ಕಳುಹೆಂದೆನುತೆಚ್ಚ ॥ ॥ ೩ ॥ ಸೈರಿಸಿ ಚೇದಿಪ । ನೇರಿಸುತನಲನ । ಶೌರಿಯ ಗುರಿಯಿಡಲು ॥ ವಾರುಣದಿಂದ ನಿ । ವಾರಿಸೆ ಗರಳವ । ಕಾರುವ ಸರ್ಪಾಸ್ತ್ರ ॥ ೪ ॥ ಬಿಡಲಸುರಾರಿ ಗ । ರುಡನಿಂದರಿಯಲು । ಜಡಜಾಸನಶರವ ॥ ಪೊಡವಿಪನೆಚ್ಚಡೆ । ನಡುವಿನೊಳಗೆ ಹರಿ । ಕಡಿದಿಡೆ ಮತ್ತವನು ॥ ೫ ॥

ಭಾಮಿನಿ.

ಎಚ್ಚ ಮಂತ್ರಶಿಲೀಮುಖಂಗಳ । ನುಚ್ಚುನುರಿಗೆಯ್ದಬ್ಜನಾಭನು । ಕೊಚ್ಚಿದನು ರಥದಶ್ವಗಳನಾ ಕೇತುದಂಡವನು ॥ ಅಚ್ಚ ಮಸೆಯಲಗಿನಲಿ ಕವಚವ । ಬಿಚ್ಚಿದನು ಡೊಣೆ ಬಿಲ್ಲಗಳನು ಮಗು । ಳೆಚ್ಚು ಮುಕುಟಚ್ಛತ್ರಗಳ ಕೆಡಹಿದನು ಚೇದಿಪನ ॥ ೧ ॥

ಕಂದಪದ್ಯ.

ಭೂಲೋಲನೆ ಕೇಳೈ ಶಿಶು । ಪಾಲಾದಿಗಳಸುವಿಡಿಪ್ರೌಢ ವೈಗರೆ ನೋಡಲ್ ॥ ನೀಲಾಂಗಂ ಪಡೆಯುತ ಜಯ । ಬಾಲೆಯು ಶಂಖವನೊಳಗಿದ ಘೋಯೆನೆ ವಿಬುಧರ್ ॥ ೧ ॥

ರಾಗ ಶಂಕರಾಭರಣ, ಮಟ್ಟೆತಾಳ.

ಜನಪ ಲಾಲಿಸಿತ್ತ ಮಾಗ । ಧನ ಬಲೌಘವ ॥ ಕನಲಿ ಹೊಕ್ಕು ಕಡಿದ ರಾಮ ಬಿನುಗರಡವಿಯ ॥ ೧ ॥ ಮುಸಲ ಹಲಗಳಿಂದ

ಹೊಡೆದು । ವಸುಧೆಗುರುಳಿಸಿ ॥ ಅಸಿಯರದ ಚತುರ್ಬಲವನು । ಅಸಮ ಸಾಹಸಿ ॥ ೨ ॥ ಹರಿವ ರಕ್ತ ಕರುಳ ಹೊರಳಿ । ಧರೆಯು ತುಂಬಲು ॥ ಆರರೆ ಬಲು ಭಯಾನಕದೊಳು । ಧುರವು ತೋರಲು ॥ ॥ ೩ ॥ ಸೃಷ್ಟಿಪಾಲನಿಚಯ ಮಗಧ । ಸಿಟ್ಟ ಕಿಚ್ಚಿದು ॥ ಅಟ್ಟಿ ಸುಡುವು ದೆನುತ ರಣವ । ಬಿಟ್ಟು ಹಾಯ್ವುದು ॥ ೪ ॥

**ವಾರ್ಧಿಕ್ಯ.**

ಕರಿಸಿಕರ ದೀವಿಗಳೊಳಶ್ವರಥ ನಕ್ರಗಳೊ । ಳಿರಿದ ಭುಜ ಫಣೆ ಗಳೊಳ್ ಕರವೆಂಬ ಝುಷಗಳೊಳ್ । ಕರುಳ ಹಾವಸೆಗಳೊಳ್ ಬಿಲ್ಲೊಗ್ಗಿನಲೆಗಳೊಳ್ ಮುರಿದಾಯುಧಂಗಳೆನಿಪ ॥ ಕಿರುಗಿಡಂಗ ಳೊಳು ಭೀಕರ ಮಹಾನಕವಿಡಿದ । ವರಸುಳಿಗಳೊಳ್ ರತ್ನಭೂಷಣದ ಶಿಲೆಗಳೊಳ್ । ಹರಿದ ತಲೆ ಕೂರ್ಮಗಳೊಳರುಣಜಲವಾರಿಸಿಧಿ ನಡುಗಿಸಿತು ನೋಳ್ಪರೆದೆಯ ॥ ೧ ॥

**ಭಾಮಿನಿ.**

ಹೇ ಧರಾಧಿಪ ಕೇಳು ಬಲ ನು । ಗ್ಗಾದುದನು ಮೋಣಷೀಳ ಭೂಪರು । ಹೋದುದನು ಮಾಗಧನು ಕಾಣುತ ರೋಷಭೀಷಣನು ॥ ಬೈದು ಪೇತುಗರೆನುತಲಿದಿರಡ । ಹಾಯ್ದು ಕಾದುವಡಿದಿರು ನಿಲುನಿಲು । ಕೈದುಗೊಳ್ಳೆಂದೆನುತ ಮುಸಲಿಯನೆರಗುತಿಂತೆಂದ ॥ ೧ ॥

**ರಾಗ ಮಾರವಿ, ಅಷ್ಟತಾಳ.**

ಒನಕೆಗಾರನೆ ಮಝು ಭಾಪೆಲಾ । ನಿನ್ನ । ರಣದ ಕೌಶಲ್ಯವ ತೋರೆಲಾ ॥ ಜನಪರ ಗೆಲಿದಹ ಗರ್ವವ । ಬಿಟ್ಟು । ಮನೆಗೈದು ಪಿಡಿವೊಡೆ ಜೀವವ ॥ ೧ ॥ ಬಲಹೀನ ಭೂಪರ ಕೋಳ್ಕುಟ್ಟಿ । ಸರ್ವ । ನೆಲವನನ್ಯಾಯದಿ ಜಗಜಟ್ಟಿ ॥ ತಳಮುಳಿಸುವ ನಿನ್ನ ಪೇರ್ಮೆಯ । ಕ್ಷಣ । ಹಲದೊಳಿಳಿಸಿ ಸೇರ್ವೆನಾಲಯ ॥ ೨ ॥ ಪೊರೆಯೇನು ನಿನಗೆ ಭೂಮಿಪರೊಳು । ಸಹೋ । ದರರೊ ಹೆತ್ತವರೊ ಪೇಳೆನ್ನೊಳು ॥ ಒರ

ದಂಭವೀ ಕಡೆ ಸಲ್ಲದು । ನಿನ್ನ । ತುರುಗಾವ ಹಳ್ಳಿಗುಚಿತವದು ॥ ೩ ॥ ಬಂಧುತ್ವವೆಮಗೆ ಸಾಧುಗಳೊಳು । ದುರ್ಮ । ದಾಂಧರೊಡನೆ ಕಡು ಹಗೆ ಕೇಳು ॥ ಕೊಂದು ದುಷ್ಟರ ಧರ್ಮರಕ್ಷಣ । ಮಾಳ್ಪ । ದೊಂದೆ ಕರ್ತವ್ಯವೆಮ್ಮದು ಕಾಣ ॥ ೪ ॥ ಹೆಳವನೇತಕೆ ತೀರ್ಥಯಾತ್ರೆಯು । ಗೋವು । ಗಳ ಮೇಯಿಸುವುದಾವ ನೀತಿಯು ॥ ಬಲವಂತ ಕಂಸನ ಕೆಡಹಿದ । ತರು । ವಲಿಯು ತೋರಿಸು ಸಾಕೀ ವಾಗ್ವಾದ ॥ ೫ ॥ ಗೋವಿನಿಂದತಿ ಸಾಧು ಜೀವಿಯು । ಕಾಣ । ದೋವಿದೆ ಪಶುಗಳ ನಮ್ಮಯ್ಯ ॥ ನೋವುದ ಸಹಿಸದೆ ಕಂಸನ । ಕೊಂದ । ಗೋವಿಂದ ವಧಿಸುವೆ ನಾ ನಿನ್ನ ॥ ೬ ॥

ರಾಗ ಕೇತಾರಗೌಳ, ಝಂಪೆತಾಳ.

ಪ್ರತುರೇ ರೌಹಿಣೇಯ । ಚದುರನಹೆ । ಮಾತಿನೊಳು ತಿಳಿದೆ ಬಗೆಯ ॥ ಮಾತುಳನ ಕೊಂದ ಪಾಪ । ತೊಲಗುವುದೆ । ಏತಕೀ ಬರಿ ವಿಲಾಪ ॥ ೧ ॥ ನೆರೆ ಗುಣಾವಳಿ ದುರ್ಗುಣ । ಲೇಶವನು । ಮರೆಸದೇ ಚಂದ್ರಕಿರಣ ॥ ಕರೆಯ ತುಳಿಯದೆ ಕಂಸನ । ವಧಿಸೆ ಸುಖ । ವಿರುತಿಹುದು ಯಾದವಗಣ ॥ ೨ ॥ ಮೋಹದಣುಗೆಯರ ಶೋಕ । ಮನಕೆ ಬಲು । ದಾಹ ಕುಡೆ ಬಂದೆ ಧುರಕಾ ॥ ದ್ರೋಹಿ ತಡೆಯೆನುತ ಗದೆಯ । ತಿರುಗಿಸುತ । ಸಾಹಸಿಗ ಹೊಡೆದನೆದೆಯ ॥ ೩ ॥ ಪುಸಿಗೆಯ್ದು ಹತಿಯ ರಾಮ । ಪ್ರತಿಯಾಗಿ । ಮುಸಲದಿಂ ಪೊಯ್ದನಮಮ । ವಸುಧೆಪಾಲನ ವರೂಥ । ನುಗ್ಗಾದು । ದೆಸೆವಶ್ವ ಸೂತ ಸಹಿತ ॥ ೪ ॥

ಭಾಮಿನಿ.

ಧರಣಿಪತಿ ಕೇಳಿಂತು ಮಗಧನ । ವಿರಥನಾಗಿಸಿ ಹೊಡೆದು ಭಂಗಿಸಿ । ಹರಣ ಮಾತ್ರವನುಳುಹಿ ಕೊಲುವಡೆ ಸಮಯವಲ್ಲೆಂದು । ತಿರುಗಿಸಲು ಹಲಿರಥವ ತನ್ನೃಪ । ಮರಳಿದನು ನಿಜಪುರಕೆ ಲಜ್ಜಾ । ಭರದಿ ಚೈದ್ಯ ಸಮೇತಲಸಜ್ಜಯಲಲನೆಯೊಡಗೂಡಿ ॥ ೧ ॥

ರಾಗ ಸಾಂಗತ್ಯ, ರೂಪಕತಾಳ.

ಉತ್ತರೆಯುಣಾಗ ಕೇಳಂಬುಜದೃಶ ಬಲ । ರುತ್ತರಿಸುತ ಹಗೆ ಗಡಲ ॥ ಸತ್ತ್ರ ಸೈನ್ಯಕೆ ಜೀವವಿತ್ತು ಭೂಷಣ ಕೋಶ । ವಸ್ತು ವಾಹನವ ಹೇರಿಸುತ ॥ ೧ ॥ ಸುರರಭ್ರದೊಳಗುಲಿಯುಲು ಬಲು ನಲಿವಿಂದ । ಪುರಕೆ ಬರಲು ಪೌರಜನವು ॥ ಹರಿಯ ಕೊಂಡಾಡುತಿದಿರ್ಗೊಂಡು ಕರತಾರೆ । ಸರುವ ಸಂಭ್ರಮಗಳಿಂದಾಗ ॥ ೨ ॥ ಬಿರುದಿನ ಕಹಳೆಗಳುಲಿಯುಲು ರಾಜವುಂ । ದಿರಕೈದಿ ಧನಜಾಲವನ್ನು ॥ ದೊರೆಯುಗ್ರಸೇನಗತ್ತತಿಶಯ ವಿಭವದೊ । ಳಿರುತಿರ್ದರಸುರಾರಿ ಬಲರು ॥ ೩ ॥

ರಾಗ ಮಧ್ಯಮಾವತಿ, ತ್ರಿವುಡೆತಾಳ.

ಅರಸ ಕೇಳಾಜೆಯೊಳು ಮಾಗಧ । ಧರಣಿಪತಿ ಮನಮರುಗುತಲೆ ನಿಜ । ಪುರವ ಹೊಕ್ಕನು ತಲೆಯ ಮುಸುಕಿನ । ಮೆರೆವ ದುಗುಡದಿ ಜೀವುತ । ಇರುಳು ಹಗಲು ॥ ೧ ॥ ಮತ್ತೆ ಮೂರನೆ ತಿಂಗಳಿಗೆ ಪಗೆ । ಪೆತ್ತು ಫಣೆಯುಂತೊದಗಿಸಿದನಿ । ಪ್ಪತ್ತುಮೂರಕ್ಷೋಹಿಣೀ ಬಲ । ಪೃಥ್ವಿಪಾಲರ ಕೂಡುತ । ಮಾಗಧೇಂದ್ರ ॥ ೨ ॥ ವೀರ ಸೌವೀರಾಂಧ್ರ ಮಾದ್ರಮ । ಹೀರಮಣನಾ ಚೇದಿಪತಿ ಹ । ಮ್ಮೀರ ಗುರ್ಜರ ಮುಖ್ಯ ಮಾರ್ಬಲ । ವಾರಿಧಿಗೆ ನದಿನದಗಳ । ತೆರದಿ ಬರಲು ॥ ೩ ॥

ಭಾಮಿನಿ.

ಎನ್ನ ಬಿಡು ತನ್ನ ಬಿಡು ಸಮರಕೆ । ಮುನ್ನರಿಪೆ ಬಲ ಕೃಷ್ಣನು ತಾ । ನೆನ್ನ ಹರಿಬವಿದೆನ್ನದೆಂದುಲಿಯುಲು ಭಟಾನೀಕ ॥ ಅರ್ಣೋಪಮ ಬಲವನೊಡಗೊಂ । ಡುನ್ನತಾಟೋಪದಿ ಗಿರಿವ್ರಜ । ಪೊನ್ನ ರಥವೇರುತ್ತ ನಡೆದನು ಮಧುರೆಗಿದಿರಾಗಿ ॥ ೧ ॥

ಕಂದಪದ್ಯ.

ಹೊಡೆವಾನಕಭೇರಿಧ್ವನಿ । ಗುಡುನಿಚಯಂ ನೆಲಕುದುರಲು ಭರದಿಂ ನಡೆದು ॥ ಪಡುವಣ್ಗ ಯಮುನಾನದಿ । ತಡಿಯುಂ ಸೇರ್ದುದು ಜರಾಸಂಧನ ಕಟಕಂ ॥ ೧ ॥

### ವಾರ್ಧಿಕ್ಯ.

ಮಾರುತಹತಿಗೇಳುವ ತರಂಗದಿಂ ಭಂಗದಿಂ । ಚರಿಸುತಿರುತಿಹ ಸ್ರೋತನಿಕರದಿಂ ಮಕರದಿಂ । ತರವಿಡಿದು ಬೆಳೆದ ವೃಕ್ಷಂಗಳಿಂ ವಿಹಂಗಳಿಂದಡಿಯ ಕರ್ಗಲ್ಗಳಿಂದ ॥ ಭರದೊಳುಯ್ಯಲ್ಪಡುವ ಸುಮಗಳಿಂ ದ್ರುಮಗಳಿಂ । ಪರಿದು ಬಂದೊಳವುಗುವ ತೊರೆಗಳಿಂ ನೊರೆಗಳಿಂ । ದುರೆ ನೀರನೀಂಟೆ ಬಹ ಮೃಗಗಳಿಂ ಖಗಗಳಿಂದಾ ಜಗುನೆ ಕಣ್ಗೆಸೆವಳು ॥ ೧ ॥

### ರಾಗ ಕೇತಾರಗೌಳ, ಅಷ್ಟತಾಳ.

ಕುರುಕುಲೋದ್ಭವನೆ ಕೇಳು । ಉರು ನದಿತೀರಕೆ । ಬರಲು ಮಾಗಧ ಸೈನಿಕ ॥ ದುರುಳರ ಮೊಗ ನೋಡ । ಲರಿದೆಂದು ಹೊಕ್ಕನು । ತರಣಿಯು ಪಡುಗಡಲ ॥ ೧ ॥ ಮುಗಿಯೆ ಪಂಕಜ ನಸು । ನಗಲು ಕೈರವ ಗೂಡ । ಖಗಸಂದೋಹವು ಸೇರಲು ॥ ಜಗವ ಮುಸುಕೆ ತಮ । ನೆಗೆಯೆ ತಾರಾಗಣ । ಜಗುನೆಯುಸಿಕನಿರ್ದಳು ॥ ೨ ॥ ಕಾಣುತ್ತ ಮಾಗಧ । ಕ್ಷೋಣಿಪಾಲಕ ತನ್ನ । ಸೇನಾಧಿಪರ ಕರೆದು ॥ ಈ ನಿಶಿಯೊಳಗಿಲ್ಲಿ । ಯೇ ನಿಂದು ಪ್ರೋಪ್ರದೆಂ । ದಾಣತಿಯಿತ್ತನಾಗ ॥ ೩ ॥ ಎನೆ ಹಸಾದವೆನುತ್ತ । ಜನಪರು ಶಿಬಿರಂಗ । ಳನು ಗೈಸಿ ಮೋದದಿಂದ ॥ ದಣಿವಾರಿಸುತಿರೆ ರ । ಜನಿ ಬಲಿದುದು ಮೇಣ । ಗಿನಿಗಾಯ್ತು ಸೋಲ್ಪಿಚಾರ ॥ ೪ ॥

### ಕಂದಪದ್ಯ.

ಮಾಗಧಸೈನಿಕರಿರುಳೊಳ । ಗಾಗಿ ಸುಷುಪ್ತಿಗೆ ಸುಖದೊಳಿರಲ್ ಇಳಿಕತ್ತಲ್ ॥ ಸಾಗುತಲಾ ಗೂಢಚರರ್ । ಬೇಗದಿ ಹದನಂ ಸರೋಜನೇತ್ರಂಗೆಂದರ್ ॥ ೧ ॥

### ರಾಗ ಮುಖಾರಿ, ಏಕತಾಳ.

ಚಿತ್ತಾವಧಾನ ಗೋವಳರಾಯ । ನವನೀರದಕಾಯ । ಚಿತ್ತಾವಧಾನ ॥ ಪಲ್ಲ ॥ ಮೊದಲೊಂದು ಬಾರಿ ವೈರಿಬಲವ । ಸದೆದಿತ್ತೆ ಸುಖವ ।

ಮಧುರಾಪುರಕ್ಕೆ ಮಗುಳೆ ಭಲವ ॥ ಅಧಿಕವೆನಿಸಿ ಮಾ। ಗಧ ತಾಳುತ ಲಿಂ। ತುದಧಿಯ ಪಡಿ ಬಲ। ವದುಭುತದಿಂದ॥ ಚಿತ್ತಾವಧಾನ॥ ೧ ॥ ನೆರಹಿ ಬಂದಪನಾಜಿಗಿಂದು । ಇರುಳಾಯಿತೆಂದು । ಹರುಷದಿ ಯಮುನಾತಟದಿ ನಿಂದು ॥ ಬರುವನು ನಾಳೆಯಿ । ದರಿತುದನೊರೆ ದೆವು। ಕರುಣಾಕರ ನೀ। ಪೊರೆಯೆಂದೆರಗಲು॥ ಚಿತ್ತಾವಧಾನ॥ ೨॥

## ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಎಂದುತಾಹವಧೀರ ಮಾಗಧ । ಬಂದ ಕಾರ್ಯವ ಕುರಿತು ರಾಮ ಮು। ಕುಂದರಾಲೋಚಿಸಿದರೊಲವಿನೊ। ಳಂದಿನಿರುಳು ॥ ೧॥ ಮಂದಮತಿಯನು ಬರಗೊಡುವುದೆಮ । ಗಿಂದು ಹಿತವಲ್ಲಾತ ಮಧುರೆಗೆ । ಬಂದರೀ ಸಮಯದೊಳು ನಾವ್ಗೆಲು। ವಂದವೆಂತು ॥ ॥ ೨ ॥ ಆದುದಷ್ಟೇ ಮೂರು ತಿಂಗಳು। ಯಾದವರ ಪೆಸರಿಲ್ಲವೀ ಸೂ। ಳಾ ದುರುಳರನು ತರಿವ ರಾತ್ರಿಯೊ । ಳೈದಿ ನಾವು ॥ ೩॥ ಎನುತ ಸತ್ಯಕತನುಜ ಗದ ಗಾಂ। ದಿನಿಜ ಪೃಥು ಕೃತವರ್ಮ ಮುಖ್ಯರ । ನನಿಮಿಷಾರ್ಚಿತ ಕರೆಸಿ ನುಡಿದನು। ಮನದ ಬಗೆಯ ॥ ೪॥

## ರಾಗ ತುಜಾವಂತು, ಮಟ್ಟೆತಾಳ.

ಕೇಳಿ ಯಾದವೋತ್ತಮರ್ಕಳು ॥ ಪಲ್ಲ ॥ ಖೂಳ ಮಾಗಧೇಶ ನಮ್ಮ। ಕಾಳೆಗದಲಿ ಸೋತು ಮುನ್ನ। ಮೂಲಬಲವ ನೆರಹಿ ಮತ್ತೆ। ಧಾಳಿಯಿಡಲು ಬರುವನಂತೆ॥ ಕೇಳಿ॥ ೧॥ ಆ ಮಹಾರಿಬಲವ ಮಧ್ಯ। ತಾಮಸಿಯೊಳು ತಡೆದು ನಾವು। ಪ್ರೇಮದಿಂದ ತರಿದು ವಿಜಯ। ಕಾಮಿನಿಯನು ಪಡೆವುದುಚಿತ ॥ ಕೇಳಿ ॥ ೨ ॥ ಒಮ್ಮೆ ನಡೆದ ರಣದೊಳಾದ। ನಿಮ್ಮ ನೋವು ಮಾಸಲಿಲ್ಲ । ಧರ್ಮವೀಗ ನಮಗೆ ದುಷ್ಟ। ಕರ್ಮರಸುವ ಸೆಳೆವುದೊಂದೆ॥ ಕೇಳಿ ॥ ೩॥ ಎನಲು ಘುಡುಘುಡಿಸುತ ಸಿಂಹ । ನಿನದವೆಸಗಿ ಯದುವರೇಣ್ಯ । ರನಘರೆದ್ದರಾಗ ತಮ್ಮ। ಧನುವನೊದರಿಸುತ್ತ ಜವದಿ॥ ಕೇಳಿ॥ ೪॥

### ಭಾಮಿನಿ.

ಸೃಷ್ಟಿಪತಿ ಕೇಳಿಂತು ದನುಜಘ । ರಟ್ಟನಾಜ್ಞೆಯೊಳಖಿಲ ಯದು ಬಲ । ನಟ್ಟಿರುಳು ಗುಪಿತದಲಿ ಹಾಯ್ದುದು ರಿಪುಗಳಭಿಮುಖಕೆ ॥ ಬಿಟ್ಟಿರಿಸಿ ಕೈದುಗಳ ಹಾಸುತ । ಲುಟ್ಟುದನು ಮೈಮರೆದು ನಿದ್ರಿಪ । ಜಟ್ಟಿಗಳ ಕಟ್ಟಿರ್ದ ಗಜಹಯಕುಲವ ಕಂಡಾಗ ॥ ೧ ॥

### ಕಂದಪದ್ಯ.

ಉಲಿಯಲು ನಿಸ್ಸಾಳಂಗಳ್ । ನೆಲನದುರುವ ಪೋಲ್ ಪೊಳಗಿಸೆ ಹರಿ ಶಂಖವ ಮೇಣ್ ॥ ಕಳವಳಿಸುತ ಕಟಕಂ ರಿಪು । ಬಲದೊಳ್ ಸಂಭ್ರಮಿಸಿದುದನುವರಕೆಂದಾಗಳ್ ॥ ೧ ॥

### ರಾಗ ಭೈರವಿ, ತ್ರಿವುಡೆತಾಳ.

ಹೊಡೆದರಾಗ । ರಿಪುವನ । ಗಡಿದರಾಗ ॥ ಪಲ್ಲ ॥ ಮತ್ತೆ ಹರಿ ಯೆಡವಂಕದಲಿ ಖತಿ । ವೆತ್ತು ಮುತ್ತಲು ಮಾಗಧ । ಮೊತ್ತವನು ಬಲವಂಕದಲಿ ಬರೆ । ಸಾತ್ಯಕಿಯು ಮುಸಲಾಯುಧ । ಕತ್ತರಿಸಿ ಗಜ ಹಯುವ ಮಧ್ಯದೊ । ಳೊತ್ತಿದೊಡೆ ದಾವಾನಲ । ಸುತ್ತಿದಡವಿಯೊ ~~ಲಾಗೆ ವೈರಿಘ । ಟೋತ್ತಮರು ಕಾಣುತ್ತಿಹಾ ।~~ ಹೊಡೆದರಾಗ ॥ ೧ ॥ ತುರಗ ಹೂಡದ ರಥಕೆ ರಥಿಕರು । ತೊರೆದು ಸೂತನ ಹತ್ತುತ । ಕರಿಗಳಿಗೆ ಗುಳವಿಡದೆ ಮಾವ್ತರು । ಬರಿಯ ಹಸ್ತದೊಳೇರುತ । ಧರಿಸಿ ಚಮ್ಮಟಿಕೆಯನು ಬಿಗಿಯದ । ಹರಿಯನಡರುತ ರಾವುತ । ನೆರವಿ ಬಂತು ಸಿರಸ್ತ್ರದಿಂ ಪದ । ಚರರು ನಡೆದರು ಸಮರಕೆನುತ ॥ ಹೊಡೆದ ರಾಗ ॥ ೨ ॥ ಬಿಟ್ಟ ಮಂಡೆಯಲೈದಿದರು ಜಗ । ಜಟ್ಟಿಗಳು ಧುರ ಧೀರರು । ಮುಟ್ಟಿ ಹೊಯ್ದರು ಹಾಯ್ದರಮದುರ್ಗಣಿ । ಹೆಟ್ಟುಗೆಯರನು ವೀರರು । ಅಟ್ಟಿ ತರಿದರು ಶತ್ರುಬಲವನು । ಕುಟ್ಟಿ ಕೈಕಾಲ್ ಶಿರವನು । ಒಟ್ಟಿಬಯಲಾಯ್ತರಿಚತುರ್ಬಲ । ಸುಟ್ಟುಕರಿದವೊಲೆಂದನು ॥ ಹೊಡೆ ದರಾಗ ॥ ೩ ॥

ವಾರ್ಧಿಕ್ಯ.

ಕರಿ ಪಯೋಜಾಕರವ ಪರಶುಧರ ಖಳನೃಪರ । ಹರನೈದಿ ಮುಪ್ಪೊಳಲ ತರಣಿ ಕಗ್ಗತ್ತಲೆಯ । ಸುರವರಂ ಗಿರಿಕುಲವನರಿವು ಬಲುಮೂಷತೆಯ ದುರಿತವಮಂ ಪುಣ್ಯರಾಶಿ ॥ ವರಯೋಗಿ ಷಡ್ರಿಪುವ ಶರಧಿಯಂ ಕುಂಭಜಂ । ಹರಿ ಕರಿಯನೆಂತಂತೆ ಕೆರಳಿ ಸದೆಬಡಿದರಾ । ದುರುಳ ಭೂಪಾಲಕರ ನೆರವಿಯಂ ಯದುಕುಲಜರಿರುಳ ಕಡೆಜಾವ ದಲ್ಲಿ ॥ ೧ ॥

ಭಾಮಿನಿ.

ಧರಣಿಪತಿ ಕೇಳಾ ಸಮಯದೊಳು । ಹರವ ಕತ್ತಲೆಯೊಡನೆ ಸೈನಿಕ । ಹರದುದವನೀಶ್ವರರು ವಿಪಿನೇಶ್ವರರೆನಿಸೆ ಮಿಕ್ಕ ॥ ಕರಿತುರಗ ಗಳಿಗೊಡೆಯರಿಲ್ಲನಿ । ತರೊಳು ಬಲನಡಹಾಯ್ತು ಮಗಧಂ । ಗೆರಗ ಲಸ್ತ್ರಾಭರಣವಿರಹಿತನೆಂದಸುರೆ ಮುಳಿದು ॥ ೧ ॥

ರಾಗ ಭೈರವಿ, ಅಷ್ಟತಾಳ.

ಧೀರುರೆ ಮುಝು ಗೋವಳ । ನಿನ್ನಯ ಧರ್ಮ । ಸಾರವಿದೇನೊ ಕಳ್ಳೆ ॥ ಆರೆಲೊ ಗುರು ನಿನ । ಗೀ ರಹಸ್ಯಕೆ ಮುಂದೆ । ದಾರಿಯೇನೆಲೊ ನಿನಗೆ ॥ ೧ ॥ ಪಾತಕಿ ನಿಷ್ಕಾರಣ । ಯಾದವರನು । ಘಾತಿಸ ಬಂದ ಡಿನ್ನಾ ॥ ಯಾತುಧಾನಾಂಶರ । ವ್ರಾತವ ಸವರುವ । ಡೀ ತೆರನೆಲೊ ಸಾಧನ ॥ ೨ ॥ ತನುಜೆಯರಿಗೆ ವೈಧವ್ಯ । ಬರಿಸಿ ಕಂಸ । ನನು ಸಂಹರಿಸೆ ಹಗೆಯ ॥ ಕನಲಿ ತೀರಿಸ ಬಂದೆ । ಜನಪರೊಡನೆ ಸುಮ್ಮ । ನೆಸಬೇಡ ಮೋಸಗಾರ ॥ ೩ ॥ ವೀರನೆ ಬಲ್ಲಿದನು । ನೀನಾಗೆ ಕು । ಮಾರಿಯರ್ಗೆನೆಯನನು ॥ ಭೂರಿ ಯಾದವಪರಿ । ವಾರಕಟ್ಟಳೆಯಿಂತೆ । ಬಾರಿಸದಿರ್ದುದೇನು ॥ ೪ ॥ ಸಾಕೆಲವೋ ವಿಚಾರ । ಧುರದಿ ನಿನ್ನ । ನಾ ಕಾರಿಸುವೆ ಕೆನ್ನೀರ ॥ ಜೋಕೆಯೊಳ್ಳೈದು ಪಿಂ । ದೇಕೆ ನಿನಗೆ ರಣ । ಪೋಕ ನೀ ಬಿಡು ಕಪಟ ॥ ೫ ॥

### ರಾಗ ಸಾಂಗತ್ಯ, ರೂಪಕತಾಳ.

ಎಂದೆನುತಲಿ ಮುಷ್ಟಿಯಿಂದ ಮಾಗಧನು ಕಾ। ಳಿಂದೀಭೇದನನ ತಿವಿಯಲು ॥ ಕುಂದದೆ ನೇಗಿಲ ತಿರುಹಿಡಲಾ ಜರಾ। ಸಂಧನು ಬಳಲಿ ಕಂಗೆಟ್ಟು ॥ ೧ ॥ ಹರಣದಾಶೆಯೊಳೋಡಿ ಹಳುವವ ಹೊಕ್ಕನು । ಬಿರುದಾವಳಿಯನೆಲ್ಲ ಬಿಸುಟು ॥ ಅರಸುತಲಿರೆ ಮಂತ್ರಿಗಳು ಮೇಣು ನೃಪವರ್ಗ। ಬರಿಗಾಲೊಳಡವಿಮಧ್ಯದಲಿ ॥ ೨ ॥ ಹರಿರಾಮರಾ ವೈರಿ ಬಲದ ಬೊಕ್ಕಸ ರತ್ನಾ। ಭರಣಾದಿ ಧನಸಂಚಯವನು ॥ ಹೊರಿಸುತ್ತ ಯಾದವರೊಡನೈದೆ ಮಧುರೆಗೆ । ಅರಸ ಕೇಳಿತ್ತಲಾದುದನು ॥ ೩ ॥

### ರಾಗ ಭೈರವಿ, ಝಂಪೆತಾಳ.

ಇಳೆಯಧಿಪ ತನಗಾದ। ಬಲು ಭಂಗವನು ನೆನೆದು। ಕಳವಳಿಸಿ ಮರುಗುತ್ತ । ನಿಳಯವನು ಹೊಗದೆ ॥ ೧ ॥ ಎಂತಿವರ ಸಂಹರಿಸಿ। ಸಂಥ ಜೈಸುವೆನೆನುತ। ಚಿಂತಿಸುತ್ತಖಿಳ ಭೂ। ಕಾಂತರೊಡಗೂಡಿ ॥ ॥ ೨ ॥ ಕಾನನದಿ ತೊಳಲುತೀ। ಶಾನನನು ಸ್ಮರಿಸುತ್ತ । ತಾ ನಡೆದ ವಹಿಲದಿಂ। ಶೋಣಿತಾಪುರಕೆ ॥ ೩ ॥

### ವಾರ್ಧಿಕ್ಯ.

ನರಪೌತ್ರ ಕೇಳತ್ತ ಶೋಣಿತಾಪುರದಿ ಬಲಿ। ತರಳ ಬಾಣಾಸುರಂ ಮುನ್ನ ಹರನಂ ತಪದಿ। ಹರುಷಗೊಳಿಸಿ ಸಹಸ್ರ ಭುಜಗಳಂ ಪಡೆದು ಗೌರೀಶನಂ ಸತತ ತನ್ನ ॥ ಅರಮನೆಯೊಳಗೆ ನಿಲಿಸುತಧಿಕ ವೈಭವದಿಂದ। ಸುರವೈರಿಸಂಕುಲದ ಚಕ್ರವರ್ತಿತ್ವದಿಂ। ದಿರುತಿರಲು ಸಚಿವ ಸಾಮಂತಾಪ್ತರಿಂದೊಂದು ದಿವಸ ಒಡ್ಡೋಲಗದೊಳು ॥ ೧ ॥

### ಭಾಮಿನಿ.

ಭೂತಳಾಧಿಪ ಮಾಗಧೇಂದ್ರನು । ಸೋತು ದುಗುಡದಿ ಬಂದ ವಾರ್ತೆಯು । ದೂತರೊಡೆಯುಂಗೆರಗಿ ಬಿನ್ನವಿಸಲ್ಕೆ ಲಾಲಿಸುತ ॥ ಪ್ರೀತಿಯಿಂ ಮಂತ್ರಿಪ್ರಮುಖರಿಂ । ದಾತನಂ ಮನ್ನಿಸುತ ಕರೆತಂ। ದೀ ತೆರದಿ ಬೆಸಗೊಂಡನರ್ಘ್ಯಾಸನದಿ ಕುಳ್ಳಿರಿಸಿ ॥ ೧ ॥

ರಾಗ ತುಜಾವಂತು, ಝುಂಪೆತಾಳ.

ಕ್ಷೇಮವೇನೈ ಮಗಧ । ಗೋವಿನಿಪ ನಿನಗೆ ॥ ಕಾಮಿನೀಸುತರು ಪರಿ । ಣಾಮದಿಂದಿಹರೆ ॥ ಕ್ಷೇಮವೇನೈ ॥ ಪಲ್ಲ ॥ ಪುರಜನರು ಮನ್ನೆಯರು ಪರಿಜನರು ಪದುಳಿಗರೆ । ಪುರಹರನ ದಯೆಗೀಗ । ಕೊರತೆಯಿಲ್ಲೈಸೆ ॥ ಧರಣಿಪರು ನಿನ್ನಾಜ್ಞೆ । ಗೆರಡೆಣಿಸದಿಹರೆ ಹೊಸ । ಬರವೇನು ಮೊಗದ ಸಿರಿ । ಹಿಂಗಿತೇಕಯ್ಯ ॥ ಕ್ಷೇಮವೇನೈ ॥ ೧ ॥ ದಿತಿಜೇಂದ್ರ ಕೇಳು ಸತಿ । ಸುತ ಪೌರತತಿಯುಗಜಾ । ಪತಿಯು ದಯೆಯಿಂದನಕ । ಸುಖದೊಳಿಹುದೀಗ ॥ ಅತುಲಬಲ ಎನ್ನ ದು । ಸ್ಥಿತಿಯ ಪೇಳುವುದೇನು । ಗತಿಗೆಡುಕನಾದೆ ನಾ । ನೊಂದು ಕತದಿಂದ ॥ ಕ್ಷೇಮವೇನೈ ॥ ೨ ॥ ಮಾನನಿಧಿ ನಿರವಿಸಪ । ಮಾನಗಳ ಬಗೆಯೆಲ್ಲ । ಪ್ರಾಣಸಖರೆನ್ನೊಳಗೆ । ನ್ಯೂನತೆಯು ಸಲ್ಲ ॥ ಕ್ಷೋಣಿ ಹದಿನಾಲ್ಕೆನ್ನ । ತ್ರಾಣ ಪರಿಕಿಸ ಬರಲು । ತ್ರಿನಯನನೊಲ್ಮೆಯಿಂ । ಗಣಿಸೆನೆನಲೆಂದ । ಕ್ಷೇಮವೇನೈ ॥ ೩ ॥ ಬಲ ಕೃಷ್ಣರೆಂಬ ಗೋ । ವಳರಧರ್ಮದಿ ನೃಪರ । ಕಲಹದೊಳು ಪರಿಭವಿಸಿ । ಸರ್ವ ಸಾಧನವ ॥ ಚೆಲುವ ರಥ ಹಯದಂತಿ । ಕುಲವ ಕೋಶಂಗಳನು । ಸುಲಭದಿಂದೆಳೆದೊಯ್ದ । ರಳುಕದವರಿಂದು ॥ ೪ ॥

ರಾಗ ಕೇತಾರಗೌಳ, ಝುಂಪೆತಾಳ.

ಆರರೆ ಚೋದಿಗವಿದೈಸೆ । ಗೋಪಾಲ । ತರಳರೀ ನೃಪರ ಜೈಸೆ । ತರುವಲಿಗಳೊಡನೆ ಯುದ್ಧ । ಪೇಳೆಂತು । ನೆರೆದುದಾವೆಡೆಯೆಂಬುದೆ । ॥ ೧ ॥ ಮಿತ್ರ ಕೇಳ್ ಯಾದವರನು । ಮುರಿಯಲು ಧ । ರಿತ್ರಿಪರ ನೆರಹಿ ನಾನು ॥ ಮಿತ್ರಸುತೆ ದಡದಿ ಸೇನೆ । ಬಂದಿಳಿಯೆ । ರಾತ್ರಿ ಜೈಸಿದರು ನಿನ್ನೆ ॥ ೨ ॥ ವೋಸದಿಂ ಗೆಲ್ದರಿನ್ನು । ಪಟುಭಟರ । ನೀ ಸೋಲ್ಗೆ ಚಿಂತೆಯೇನು ॥ ರೋಷವೇಕಾಯ್ತು ನಿನಗೆ । ಯಾದವರೊಳೀಸು ವಿಸ್ತರಿಪುದೆಮಗೆ ॥ ೩ ॥ ಆದರಾಲಿಸುವುದೆನ್ನ । ತನುಜೆಯರ । ಕಾದಲನ ಕಪಟಿ ಕೃಷ್ಣ ॥ ಯಾದವರ ಪಕ್ಷದಿಂದ । ಬಲ ಸಹಿತ । ಕಾದಿ ಬರಿಗೈಯ ಕೊಂದ ॥ ೪ ॥ ಹರಿಹರರಾಮರ ದನುಜರ । ಧುರಕೆ

091996



ಹಿಂ । ಜರಿಯ ಕಂಸಾಖ್ಯ ಧೀರ ॥ ಹರಿದನೇ ಗೋಪರಿಂದ । ಪೇಳೇನ । ವಿರಚಿಸಿದ ಪ್ರತಿಯ ಮಗಧ ॥ ೫ ॥ ಆ ಲತಾಂಗಿಯರು ಬಂದು । ಮರುಗೆ ನಾ । ಕೇಳಿ ಮಾರ್ಬಲವನಂದು ॥ ಮೇಳವಿಸಿ ರಣಕೊದಗಲು । ಮಧುರೆಯೊಳು । ಸೋಲಿಸಿದರೆಮ್ಮ ಮೊದಲು ॥ ೬ ॥

### ಕಂದಪದ್ಯ.

ಕೇಳುತ ಹರಿರಾಮರ ಕ । ಟ್ಟಾಳುತನಂಗಳ ಬೆರಳನು ಮೂಗಿನೊಳಿಡುತಂ ॥ ಆಳೋಚಿಸುತಿರೆ ಬಾಣಂ । ಪೇಳಿದ ತನ್ನೆಣಿಕೆಯಂ ಜರಾಸಂಧಂ ತಾಂ ॥ ೧ ॥

### ರಾಗ ಶಂಕರಾಭರಣ, ತ್ರಿವುಡೆತಾಳ.

ಆನಿದಕೆ ಚಿಂತಿಸೆನು ತನಗಾ । ಗೀ ನೃಪಾಲಾ । ಸಂಕುಲ । ಹಾನಿವಡೆದುದು ರಣದೊಳಸು ಧನ । ಮಾನಗಳಲಿ ॥ ೧ ॥ ಸೋಲವಾದುದು ವೈಪರೀತ್ಯದ । ಕಾಲಗತಿಯು । ಧರಣಿಪ । ಜಾಲವೆತ್ತಲು ಮಲೆವ ಹುಲುಗೋ । ಪಾಲರೆತ್ತ ॥ ೨ ॥ ಕಾದಿ ವಿಜಯವನಲ್ಲದಿರೆ ನೃತಿ । ಸಾಧಿಸುವೆನು । ಬಿಡೆನೆನು । ತೈದಲೆನ್ನನು ತಡೆದರಿವರೀ । ಮೇದಿನಿಪರು ॥ ೩ ॥ ಬಂದೆನದರಿಂ ಪೇಳ್ದೆ ನಾಚಿಕೆ । ಯಂದವೆಲ್ಲ । ಯಾದವ । ವೃಂದನಾಶವ್ರತನಿಗಭಯವ । ತಂದೆ ನೀಡು ॥ ೪ ॥

### ಭಾಮಿನಿ.

ಪ್ರೌಢವಿಪತಿ ಕೇಳಾಗ ಬಾಣನು । ನುಡಿದನೈಸಲೆ ಸಾಕು ದುಗುಡವ । ಬಿಡು ಮಗಧ ತವ ಭಂಗವೆನ್ನದೆನುತ್ತ ತಕ್ಕೈಸಿ ॥ ಒಡನೆ ನೃಪರೆಲ್ಲರನು ಮನೆಗೊ । ಯ್ದುಡಿಗೆ ತೊಡಿಗೆಗಳಿಂದ ಮನ್ನಿಸಿ । ಷಡುರಸಾನ್ನವನುಣಿಸಿ ಶ್ರಮಗಳೆದೆಂದನವನೊಡನೆ ॥ ೧ ॥

### ರಾಗ ದೇಶಿ, ಅಷ್ಟತಾಳ.

ಲಾಲಿಸೊ । ಮಾತ । ಲಾಲಿಸೊ ॥ ಪಲ್ಲ ॥ ಲಾಲಿಸು ಮಗಧಭೂ । ಪಾಲ ವಾಕ್ಯವನು । ಪೇಳೆ ನೀನೇ ಬಂದೆ । ಊಳಿಗದವನು ॥

ಓಲೆಯು ತರಲೊಂದ । ಸಾಲದೆ ನಾನು । ಆಲಸ್ಯ ಗೈವಂಥ । ಕೀಳನೆ ನೀನು ॥ ಲಾಲಿಸೊ ॥ ೧ ॥ ರೂಢಿಪ ಕೇಳೆನ್ನ । ನಾಡ ಸಂಪದದ ರೂಢಿ ನಿನ್ನದು ಕೋಶ । ನೋಡೊಪ್ಪಿದಂದ ॥ ನಾಡವಾತುಗಳಿನ್ನು ಬೇಡಶ್ವರಥದ । ಜೋಡು ಶಸ್ತ್ರಾಸ್ತ್ರದ । ಪಾಡ ನೋಡೆಂದ ॥ ಲಾಲಿಸೊ ॥ ॥ ೨ ॥ ಇತ್ತೆ ಕೊಳ್ಳೆಂದಾನೆ । ಹತ್ತುಸಾವಿರವ । ದೈತ್ಯಪಾಲಕ ಲಕ್ಷ । ಉತ್ತಮ ರಥವ । ಇತ್ತನೊರಲ್ದಶ್ವ । ಹತ್ತುಲಕ್ಷಗಳ । ಮತ್ತಾಳ ಲೆಕ್ಕವೆ । ನಿತ್ತೊ ಗೊತ್ತಿಲ್ಲ ॥ ಲಾಲಿಸೊ ॥ ೩ ॥

ವಾರ್ಧಿಕ್ಯ.

ಪೃಥ್ವಿಪತಿ ಕೇಳ್ ಬಳಿಕ ಮುನ್ನೂರು ಮಂದಿ ದನು । ಜೋತ್ತ ಮರ ಮಾಯಾವಿದರನಖಿಳ ಶಸ್ತ್ರಾಸ್ತ್ರ । ವಸ್ತು ವಾಹನ ಕನಕಸಂಚ ಯುವನಿತ್ತಧಿಕ ಮೈತ್ರಿಯಿಂ ಮಾಗಧಂಗೆ ॥ ಮತ್ತೆ ನಿಜ ತಳತಂತ್ರ ರಕ್ಷೆಗೆನ್ನುತ ಮಂತ್ರಿ । ಸತ್ತಮರ ಕುಂಭಾಂಡ ಕೂಪಕರ್ಣರ ಕಳುಹಿ । ಸುತ್ತ ಬಾಣಂ ಬೀಳ್ಕೊಡಲು ಮಗಧಗೆಂದರತಿ ಧೈರ್ಯಮಂ ಸಚಿ ವೇಶರು ॥ ೧ ॥

ರಾಗ ಮಾರವಿ, ಏಕತಾಳ.

ಬಿಡು ಬಿಡು ಮಾಗಧ । ಪೊಡವಿಪ ಚಿಂತೆಯು । ತಡೆಯದೆ ಗೋವಳರ ॥ ಹುಡುಗರ ಗರ್ವವ । ತಡೆಗಡಿವೆವು ನೀ । ಕೊಡಿಸ್ಪೈ ವೀಳೆಯವ ॥ ೧ ॥ ಹುಲುಗೆಲಸವಿದ । ಕ್ಕಲಸೆವು ಮನದಲಿ । ಹಲವೆಣೆ ಸದಿರಿಂದು ॥ ಜಲಧಿಯು ಪೀರ್ವೆವು । ಮುಳಿದರೆ ಪದಿನಾ । ಲ್ಕಿಳೆಯಡಿ ಮಗುಚುವೆವು ॥ ೨ ॥ ಬರಲಾಖಂಡಲ । ಸರಸಿಜಭವ ಮುಖ । ಸುರ ರಲ್ಲದಡಭವ ॥ ನೆರೆ ಜೆಂಬಲಕವ । ದಿರ ಪೆಸರಡಗಿಸ । ಏರೆಸ್ಪೈ ತೋರವರ ॥ ೩ ॥

ವಾರ್ಧಿಕ್ಯ.

ಕೇಳರಸ ಮಂತ್ರಿಗಳ ವಿಕ್ರಮೋಕ್ತಿಯು ಮಗಧ । ನಾಲಿಸುತ್ತ ಮುದವಾಂತು ಭರ್ಗನಕ್ಷಿಜ್ವಾಲೆ । ಕಾಳುರಿಗೆ ಕೂಡಿದಂದದಿ ಮತ್ತೆ

ನೆರಹಿದಂ ಚೆದರಿದವನಿಪಕಟಕವ ॥ ಪೇಳಲೇನಿಪ್ಪತ್ತಮೂರು ಅಕ್ಷೋಹಿಣಿಯು। ಪಾಳಿಯಿಂದಾ ಪಡೆಗೆ ಕೈವೀಸೆ ಪಹಿಲದಿಂ। ಧಾಳಿಯಿಟ್ಟುದು ಮಧುರೆಗನಿಲಸಂ ಹಿಂದುಳುಹಿ ಮನುಜದಿತಿಜರ ಸಮೂಹ ॥ ೧ ॥

ರಾಗ ಆಹೇರಿ, ಝಂಪೆತಾಳ.

ಸಮರಕೈತಂದರಾಗ। ಭೋರಿಡು। ತ್ತಮಮ ಏನೆಂಬೆನಾಗ॥ ಸಮರ॥ ಪಲ್ಲ॥ ಮತ್ತಗಜ ರಥ ತುರಗ। ಪತ್ತಿಗಳು ಬಿಡದೆ ದಂ। ಡೆತ್ತಿ ನಡೆದುವು ಗಿರಿಯು। ಮಸ್ತಕನ ಕಾರ್ಮುಗಿಲು। ಮುತ್ತುವಂದದಿ ಮಧುರೆಗೆ। ಪದಹತಿಗೆ। ಕಿತ್ತೆದ್ದ ಧೂಳಿ ಮಸಗೆ। ಗಗನವನು। ಕತ್ತಲಿಸಿ ದೆಸೆಗಾಣದಾಗೆ॥ ಸಮರ॥ ೧॥ ಭರಕೆ ಫಣಿಪತಿ ಕುಗ್ಗೆ। ಕರಿಕಮಠರಳವಳಿಯೆ। ಧರಣಿ ಬೆಸಲಾದಂತೆ। ಶರಧಿ ಗಡಿ ಮಿಕ್ಕಂತೆ। ಬರುತ ಕೋಟೆಯ ಕೆಡವಿತು। ಗುದ್ದಲಿಯು। ಕರದ ಬಲ ಕಡಿದೊಟ್ಟಿತು। ಕೊಡಲಿಗರ। ನೆರವಿ ತರುಗಳ ಸೂರೆಹೋಯ್ತು॥ ಸಮರ॥ ॥ ೨॥ ಹನುಮರಾವಿದು ಲಂಕೆ। ಯೆನುತ ಮನೆಮನೆಗಳನು। ಅನಲಗಿತ್ತುರೆ ಕೇರಿ। ಯನು ಹೊಕ್ಕು ಜೊಬ್ಬಿರಿಯೆ। ಜನಪದದ ಕಾವಲಿಗರು। ತರುಬಲವ। ರನು ಕೈಯ್ಯ ಬಲಿದು ಖಳರು। ಹೊಡೆದು ಕೃ। ಷ್ಣನಿಗೆ ದೂರಿದನೆಂದರು॥ ಸಮರ॥ ೩॥

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಭೂತಳಾಧಿಪ ಕೇಳು ಭಯದಿಂ। ದೂತರಾಗಳೆ ಪೋಗಿ ವೈರಿ। ವ್ರಾತ ಬಂದುದನರುಹಿದಡೆ ಶ್ರೀ। ನಾಥ ಕೇಳಿ॥ ೧॥ ಮೂರನೆಯ ಸೂಳಿಂಗೆ ಪುನರಪಿ। ಸಾರಿ ಬಂದನೆ ಮಗಧ ಧುರಕೆ ವಿ। ಚಾರಿಸಲಿಸಿತ್ತೆನುತ ತಡೆಯದೆ। ವಾರಿಜಾಕ್ಷ॥ ೨॥ ಕರೆಸಿ ಯಾದವಸೈನಿಕರ ಹಲ। ಧರ ಸಹಿತ ಸಂಗರಕೆ ಪೊರಮಡೆ। ಒರೆದರಾ ಯದುವೀರರೊಡೆಯನ। ಚರಣಕೆರಗಿ॥ ೩॥

ರಾಗ ಕೇತಾರಗೌಳ, ಝಂಪೆತಾಳ.

ದೇವ ಚಿತ್ತೈಸು ವಚನ। ನೀ ಬಿಜಯ। ಗೈವನಿತು ಘನವೆ ಕದನ॥ ದಾವ ಶಿಖಿಗಿದಿರೆ ಹಳುವ। ನೋಡೊಮ್ಮೆ। ಸೇವಕರ ಕೈ

ಚಳಕವ ॥ ೧ ॥ ಹೋರುವೆವು ಸಮರಾಗ್ರದಿ । ರಿಪುಗಳಸು । ಹೀರುವೆವು ಭುಜಸತ್ತ್ವದಿ ॥ ಬೀರುವೆವು ವಿಕ್ರಮಗಳ । ಇರೆ ನಿನ್ನ । ಕಾರುಣ್ಯ ತೊಲಗದು ಛಲ ॥ ೨ ॥ ಹಿಂದೆ ಬಹುದೆಂದಪ್ಪಣೆ । ಕೈಕೊಂಡು । ಗಾಂದಿನಿಜ ಮುಖ್ಯರೊಡನೆ ॥ ಮುಂದೆ ನಡೆದಾದರ್ಥ ಧನುವ । ಜೇವೊಡೆದು । ಸಂದಿಸಲು ರಣರಂಗವ ॥ ೩ ॥

## ವಾರ್ಧಿಕ್ಯ.

ಪುರವ ಹೊರವಂಟಸುರರಿಪುರಾಮರನುವರಕೆ । ಬರುತ ಶಂಖವ ನೊಳಗಿ ಮತ್ತದಂತಿಗಳಂತೆ । ಪರಬಲವ ಹರ್ಯಕ್ಷನಾದದಿಂದುರವ ಣಿಸುತೆಸೆದರಂಬುಧಿಮಧ್ಯದ ॥ ವರಮಂದರಾದ್ರಿಯಂತದ ಕೇಳಿ ಬಂದವನು । ಹರಿಯೆ ಕವಿಕವಿಯೆನುತ ಮುತ್ತಿದರು ದುಷ್ಟಭೂ । ಪರು ಕಮಲಬಾಂಧವನನಭ್ರಗಳ್ಮುಸುಕುವಂದದಿ ಬಾಣವೃಷ್ಟಿಯಿಂದ ॥ ೧ ॥

## ರಾಗ ಭೈರವಿ, ತ್ರಿವುಡೆತಾಳ.

ಮುತ್ತಿತಾಗ । ಹರಿಯನು । ಮುತ್ತಿತಾಗ ॥ ಪಲ್ಲ ॥ ಮುತ್ತಿತಾ ನೃಪವೊತ್ತವಾ ಪುರು । ಷೋತ್ತಮನ ಬಿಡದೊತ್ತಿ ಹೊಸಮಸೆ । ವೆತ್ತ ಶರದೊಳು ಮತ್ತೆ ಹರಿ ಶಂ । ಖೋತ್ತಮವ ವೊಳಗುತ್ತ ಶಾರ್ಙ್ಗವ । ನೆತ್ತಿ ಜೇವೊಡೆದಸ್ತ್ರ ಸುರಿಯಲು । ಕತ್ತಲೆಯ ಮುರಿದುತ್ತಪಿಸುವಾ । ದಿತ್ಯನಂದದಿ ಮತ್ತಗಜ ಹಯ । ಪತ್ತಿ ರಥಗಳು ಸತ್ತ ಪರಿಯೇಂ । ಬಿತ್ತರಿಪೆನು । ಸೈನ್ಯದ । ವಸ್ಥೆಯನ್ನು ॥ ಮುತ್ತಿತಾಗ ॥ ೧ ॥ ಕುಲಿಶ ಹತಕುಲಗಿರಿಗಳೋ ಕೊಳು । ಗುಳದೊಳಡಗೆಡೆದಾನೆಗಳೊ ಶರ । ದಳಿತಕಂಧರದಶ್ವನಿಚಯವೊ । ಹಳುವವೋ ಬಿರುಗಾಳಿ ಬೀಸಿದ । ಬಲವೊ ಎನೆ ನುಗ್ಗಾಯ್ತು ಪರಬಲ । ಇಳೆ ಹಗುರವಾಗಲ್ಕೆ ಕಂಡ । ಗ್ಗಳೆಯ ಮಾಯಾವಿಗಳು ಮುನ್ನೂರ್ । ಖಳರು ಬೀಸಿದರಾಗ ಕೃಷ್ಣನ । ಬಳಿಗೆ ಮಾಯ । ಕೇಳ್ ಶಶಿ । ಕುಲದ ರಾಯ ॥ ಮುತ್ತಿತಾಗ ॥ ೨ ॥ ಕವಿಸಿ ಮಾಯೆಯ ಪುಲಿ ಕರಡಿ ಸಿಂ । ಹವೆ ಮೊದಲ ಮೃಗಗಣವೆಸಿ ಸಿದಾ । ನವಸುಭಟರಾ ಗಜಹಯಾಳಿಯ । ಸವರುತಿರಲೀಕ್ಷಿಸುತ

ಕರುಣಾ । ರ್ಣವನು ವಿಜ್ಞಾನಾಸ್ತ್ರದಲಿ ಪರಿ। ಭವಿಸುತೆಚ್ಚಡೆ ಮುರಿದುದೊಂದೇ । ನಿಮಿಷದೊಳು ರಾಕ್ಷಸರ ಮೋಹರ । ತವಕೆ ಬೆದರುವುದುಂಟೆ ಸೂರಿಯ । ನವನಿಪಾಲ । ಚೋದ್ಯದಿ । ರವನು ಕೇಳ ॥ ಮುತ್ತಿತಾಗ ॥ ೩ ॥

### ವಾರ್ಧಿಕ್ಯ.

ಶರಹತಿಗೆ ಮಡಿದುರುಳ್ದಾನೆಗಳ ಸೇನೆಗಳ । ಮುರಿದುಡಿದ ಖಳರ ಕೈಕಾಲುಗಳ ಸೀಳುಗಳ। ಧುರರಂಗದೊಳು ಸಿಡಿವ ರುಂಡಗಳ ಮುಂಡಗಳ ರಥಹಯದ ತಂಡಗಳೊಳು ॥ ನೊರೆ ರಕುತ ಹರಿಯುವ ಪ್ರವಾಹಗಳಲೂಹೆಗಳ । ಲಿರದೆ ತೋರ್ಪತಿಭಯಂಕರಮಾದ ವರಣೋದ। ವಿರುತಿರ್ಪ ಗೃಧ್ರವೃಕಜಾತಗಳ ಭೂತಗಳ ಕೂಟದಿಂ ಕಣಮಿರ್ದುದು ॥ ೧ ॥

### ಭಾಮಿನಿ.

ಭೂಪ ಕೇಳಿಂತಸುರರಳಿಯಲು । ಕೋಪದಿಂ ಬಾಣನ ಸಚಿವರಂ। ದಾ ಪರಾತ್ಪರನೆಡೆಗೆ ಹಾಯ್ದೈತರಲು ಕೃತವರ್ಮ ॥ ಕೂಪಕರ್ಣನ ತಡೆದು ಬೇಗದಿ। ಚಾಪವನು ಜೇವೊಡೆಯೆ ಕಾಣುತ । ತ್ರಾ ಪಿರಿದು ರೋಷದಲಿ ಸರಳನು ತೂಗುತಿಂತೆಂದ ॥ ೧ ॥

### ರಾಗ ಮಾರವಿ, ಏಕತಾಳ.

ನೀನಾರೆಲವೋ ನರಗುರಿ ಸೆಣಸುವೆ । ದಾನವರೆಮ್ಮೊಡನೆ ॥
ಪ್ರಾಣದೊಳ್ಪೈದುವಡಭಿಲಾಷೆಯಿರಲ್ । ಮಾಣೆನ್ನನುವರವ ॥ ೧ ॥
ಕಾದುವ ಭಟನಾರಾದೊಡೆ ನಿನಗೇಂ । ಪೋದುದು ಬಾಹುಜರು ॥
ಪೈದೆಗೆವರೆ ಬಿಡು ಕೂರ್ಗಣೆಗಳ ನೀ। ಸಾಧಿಸು ಕೈಗುಣವ ॥ ೨ ॥
ಘಡ ಬಾಯಿಗೆ ಬಂದಂದದಿ ಗಳಹುತ। ಕೆಡದಿರು ಪೊಡವಿಪರ ॥ ಕಡು
ನೀಚತ್ವದಿ ಕಳ್ಗೊಲೆಗೊಂಡಾ । ಹುಡುಗರ ತೋರಿಕೊಡು ॥ ೩ ॥
ತೊರೆಯನು ದಾಟಲ್ಕರಿಯದ ಹೇಡಿಗೆ। ಶರಧಿಯ ಮಾತೇಕೆ॥ ಮರಿ
ಸಿಂಹವು ಗಜದುರುಬೆಗೆ ಸೆಡೆವುದೆ। ಪರಿಕಿಸಿ ಪೋಗೆನ್ನ ॥ ೪ ॥ ಎಂದೆನೆ

ನಿಶಿತಾಸ್ತ್ರಂಗಳ ಸುರಿಯಲು । ಕುಂದದೆ ಮಂತ್ರೀಶ ॥ ಒಂದುಳಿಯದೆ ಕೃತವರ್ಮ ತರಿದು ತರಿ । ಸಂದಿಸೆ ಪೊಸ ಸರಳ ॥ ೫ ॥

ಕಂದಪದ್ಯ.

ಕೃತವರ್ಮಕನೆಸುಗೆಯೊಳಾ । ಯತಿಗಿಡೆ ಸಚಿವಂ ಬಳಿಕ್ಕಲಾ ಕುಂಭಾಂಡಂ ॥ ಅತಿರೋಷದಿ ಬರೆ ಸತ್ಯಕ । ಸುತ ರಥವಂ ತಡೆಯ ನೋಡಿ ಮಾತಾಡಿಸಿದಂ ॥ ೧ ॥

ರಾಗ ತುಜಾವಂತು, ಮಟ್ಟೆತಾಳ.

ಆರೆಲೋ ಪ್ರಮತ್ತ ಯೋಧನೆ ॥ ಪಲ್ಲ ॥ ಆರು ನೀನು ಹುಡುಗ ನೋಡೆ । ಸಾರಿ ಬಂದು ನಮ್ಮ ಬಲವ । ಸೂರೆಗೊಂಬೆ ಭಳಿರೆ ಜನಕ । ನಾರು ನಾಮಧೇಯವೇನು । ವೀರನಹುದು ಬೇಗ ಪೇಳೆಲಾ । ಜೀವಿಪಡೆ ತೊಲಗು । ದೂರ ಸಮರವನ್ನು ಬಿಟ್ಟಿಲಾ । ಇಂತೆಂಬ ಎನ್ನ । ವಾರತೆಯನು ಪೇಳ್ವೆ ಕೇಳೆಲಾ ॥ ಆರೆಲೋ ॥ ೧ ॥ ಗಂಡುಗಲಿ ಬಲೀಂದ್ರತನುಜ । ರುಂಡಮಾಲಶರಣ ದೈತ್ಯ । ಮಂಡಲಾಧಿನಾಥ ಮಲಿವ । ತುಂಡುದೊರೆಗಳೆದೆಯ ಬಾಣ । ಚಂಡ ಬಾಣಸಚಿವ ವಾರಿಧಿ । ಸುಧಾಂಶುಸಮ ಕುಂ । ಭಾಂಡ ತಾನು ಪೆಣಸಲಸ್ತ್ರದಿ । ಪದೆಬಡಿದು ನಿನ್ನ । ಹಿಂಡುಗಣಕೆ ಕೊಡುವೆ ನಿಮಿಷದಿ ॥ ಆರೆಲೋ ॥ ॥ ೨ ॥ ಬಿನುಗು ಸಚಿವ ಕೇಳು ಖಳವಿ । ಪಿನಕುಠಾರ ಸಾಧುಕಮಲ । ವನಪತಂಗ ವಾಸುದೇವ । ಸನಕಮುಖ್ಯವಿನುತ ಸಗುಣ । ತ್ರಿಣಯ ಮಿತ್ರ ನೀಲಗಾತ್ರನ । ಕೇವಲ್ಯ ಭಕ್ತ । ಶಿನಿಯ ಮೋಹದಣುಗ ನಾ ಕಣಾ । ಈ ರೀತಿ ಸಾವ । ತನಕ ಬಗುಳುತಿಹುದೆ ತವ ಗುಣ ॥ ಆರೆಲೋ ॥ ೩ ॥

ರಾಗ ಶಂಕರಾಭರಣ, ಅಷ್ಟತಾಳ.

ಸಾಕು ಸಾಕು ಬಾಯ ಬೊಮ್ಮ । ವೇಕೆ ಹಿಂದೆ ರಣದಿ ನೃಪರ । ನೀಕವನ್ನು ಗೆಲಿದ ಹಮ್ಮ । ಭೀಕರಿಸುವೆನು ॥ ೧ ॥ ಭೀಕರಿಪುದು ಮಾತ್ರೆ ನಿನ್ನ । ನಾ ಕೃತಾಂತನೆಡೆಗೆ ಪೋದ । ನೇಕ ಬಲಕಧೀಶನಾಗಿ ।

ಚೋಕೆಗೈವೆನು ॥ ೨ ॥ ಒದರಬೇಡವೆಲವೊ ಧೂರ್ತ। ಯದುಕುಲಜರು ಕ್ಷತ್ರಿಯರೊಳು। ಅಧಮರವರಿಗಳಿವ ಕಾಲ। ಒದಗಿತಿಂದಿಗೆ ॥ ೩ ॥ ಒದಗಿತೆಂಬುದಹುದು ಕೃಷ್ಣ । ಮುದದಿ ಜನಿಸೆ ಸುಪ್ರಸಿದ್ಧಿ। ಯದು ಕುಲಕ್ಕೆ ಪ್ರಳಯಕಾಲ। ಮದಮುಖರಿಗೆ ॥ ೪ ॥ ಮೂಗಿಲಿಗಳ ಪುರಕೆ ಸೊಟ್ಟ। ಮೂಗಿನಾತನರಸನೆಂಬ। ಹಾಗೆ ನಿಮ್ಮ ಮೂರ್ಖಕುಲಕೆ। ಆ ಗನ್ನಗತಕಿ ॥ ೫ ॥ ಆಗದಾತನಿರವು ನಿಮಗೆ । ಗೂಗೆ ರವಿಯ ಕಾಂಬುದೇ ನಿ। ಭಾಗಧೇಯನರಿವನೇ ಕಾ। ಲ್ದಾಗಿದ ನಿಧಿಯ ॥ ॥ ೬ ॥ ಹೊಳೆಗೆ ಬುರುಡೆಯನ್ನು ನಂಬು । ತಿಳಿದ ನರನು ಮುಳುಗ ದಿಹನೆ । ಇಳೆಯಪಾಲರೊಡನೆ ವೈರ । ಗಳಿಸಿ ಕೆಟ್ಟಿರಿ ॥ ೭ ॥ ಗಳಿಸಿ ಕೆಟ್ಟುದಿಲ್ಲ ನಾವು। ಖಳರ ಕೊಲಿಸಿ ಧರೆಯ ಭಾರ। ಕಳೆವನಂಬುಜಾಕ್ಷ ಮಗಧ। ಮುಳಿದ ನೆವದೊಳು ॥ ೮ ॥

ರಾಗ ಭೈರವಿ, ಏಕತಾಳ.

ಕೂಗದಿರೆಲೊ ಸಾತ್ಯಕಿಯೆ । ಕೈ । ಯ್ಯಾಗದು ಕೇಳ್ ನರ ಗುರಿಯೆ ॥ ಸಾಗಿದ ನೃಪಬಲವಲ್ಲ। ದನು। ಜಾಗಮವಿದು ಲೇಸಿಲ್ಲ ॥ ॥ ೧ ॥ ನರನಾಥರ ಬಲ ತೀರೆ । ದಿತಿ । ಜರನೊರೆಸಲು ಕರತಾರೆ ॥ ಸರುವರಿಗಂತಕ ಮಗಧ। ನೀ। ನರಿತಿದನ್ನೈದು ಮದಾಂಧ ॥ ೨ ॥ ಹುಡುಗನೆನಿಪ ದಯೆಯಿಂದ। ಹಿತ। ನುಡಿಯಲೊಡಂಬಡೆ ಮುಗುಧ॥ ತೊಡು ಮಾರ್ಗಣವನೆನುತ್ತ । ಖಳ । ಕಿಡಿಯುಗುಳುತ ಕಣ್ಣೊಳು ತಾ ॥ ೩ ॥ ಮೂರು ಮಹಾಸ್ತ್ರಂಗಳನು। ಯದು। ವೀರಗೆ ಬಿಡಲದ ನಿವನು ॥ ಘೋರನೆಯೆರಡಂ ತರಿದ । ಒಂ । ದೇರಿತೆದೆಗೆ ನೆಲ ಹಿಡಿದ ॥ ೪ ॥

ಕಂದಪದ್ಯ.

ಅರೆನಿಮಿಷಂ ನಸುಮೂರ್ಛೆಯೊ। ಳುರೆ ಹಮ್ಮೈಸುತಲನಂತ ನೊಲವಿನೊಳಂ ಚೇ॥ ತರಿಸುತ ಸಾತ್ಯಕಿ ಮಂತ್ರಿಯ। ಜರೆದಿಂತೆಂದಂ ಕನಲ್ದು ತೂಗುತ್ತಂಬಂ ॥ ೧ ॥

ರಾಗ ಕೇತಾರಗೌಳ, ಅಷ್ಟತಾಳ.

ಲೇಸುಲೇಸೇಲವೋ ಮಂ । ತ್ರೀಶ ನಾನೊಮ್ಮೆ ಹ । ಮ್ಮೈಸಿದೆ ನೆಂದೆನುತ ॥ ರಾಶಿ ಗರ್ವವ ಹೊಂದ । ದೀ ಶರದೆಸಕವ । ಸೀ ಸಲೆ ನೋಡೆನುತ ॥ ೧ ॥ ನಿಶಿತಕಳಂಬಗ । ಳೆಸಲು ಕುಂಭಾಂಡಕ । ನಸ ವಸದಿಂ ಕಡಿಯೆ ॥ ಮಸೆದ ಮಂತ್ರಾಸ್ತ್ರದ । ವಿಸರವನೆಚ್ಚಡೆ । ಅಸುರ ಮಧ್ಯದಿ ತುಂಡಿಸೆ ॥ ೨ ॥ ಮುಳಿದು ಶಿನೇಯ ಕೈ । ಚಳಕದಿ ಬಾಣದ । ಮಳೆಗರೆದಾ ಮಂತ್ರಿಯ ॥ ಸಲೆ ಸಂದುಸಂದುಗಳ್ । ಕಳಚುವಂತೆ ಚ್ಚಡೆ । ನೆಲಕ್ಕೊರಗಿದ ಸಚಿವ ॥ ೩ ॥

ಭಾಮಿನಿ.

ಬಿದ್ದ ಸಚಿವನು ರಕ್ತಕಾರುತ । ಲೊಯ್ದನಾತನ ರಥದಿ ಸಾರಥಿ । ಹೊದ್ದಿದರು ಮಿಕ್ಕಸುರರಂತಕನೆಡೆಯ ಕೃತವರ್ಮ ॥ ಗೆದ್ದಡಾಗಳೆ ಕೂಪಕರ್ಣನ । ಬಾಳ್ದ ದೈತ್ಯರು ಕೂಡಿ ಭಯದಿಂ । ಹಾಯ್ದರೀ ದಂದುಗವು ನಮಗೇಕೆಂದು ನಿಜಪುರಕೆ ॥ ೧ ॥

ಭೋಗಷಟ್ಪದಿ.

ಅತ್ತಲನಕ ಮಗಧನೆದೆಯು । ಹೊತ್ತೆ ಮೊದಲ ಭಂಗದಿಂದ । ಸುತ್ತಲಿರ್ಪ ಬಲವ ಕೊಲುವ ಬಲನ ಕಾಣುತ ॥ ಮತ್ತೆ ಕುಣಿಯೆ ಮೀಸೆ ದೃಷ್ಟಿ । ನೆತ್ತರಂತೆ ಮಸಗೆ ನಿಲಯ । ವೃತ್ತಿವೆನಲು ಕೆರಳೆ ರಥವ ಚಾಚಿ ನುಡಿದನು ॥ ೧ ॥

ರಾಗ ಕಾಂಬೋಧಿ, ತ್ವರಿತಝಂಪೆತಾಳ.

ಭಳಿಭಳಿರೆ ಹಿಡಿ ಬೇಗ । ಬಲನೆ ನಿನ್ನಯ ಮುಸಲ । ಹಲಗಳಂ ವೈರಿಭಂಜನದ ॥ ಬಲುಹ ತೋರಿಸು ನಿನ್ನ । ತಲೆಗೆ ಗದೆಯನು ತೊಡದೆ । ಕಲಿತನಕೆ ತೆರಪಿಲ್ಲವೆನ್ನ ॥ ೧ ॥ ಲೇಸೆನ್ನ ಭುಜಗಳಿಂ । ಗೇಸು ಜನ್ಮದ ಪುಣ್ಯ । ರಾಸಿಯೋ ಫಲಿಸಿತ್ತು ಮಗಧ ॥ ಸಾಸಿಗನು ದೊರೆದೆ ನೀ । ನೀ ಸಮರದೊಳಗೆನುತ । ರೋಷದಿಂದುಗಿದನಾಯು ಧವ ॥ ೨ ॥ ಒಂದು ಬಾರಿಗೆ ಗೆಲ್ದ । ರೆಂದು ಬರಲೆರಡನೆಗೆ । ಸಂಧಿಸುತ ಮೋಸದಿಂದಿರುಳು ॥ ಕೊಂದು ನಿದ್ರಿಸುವವರ । ದಂದುಗವನಿತ್ತೆಲವೊ

ಹಂದೆ ಮೆರೆದಿರಿ ಕಳ್ಳತನದಿ ॥ ೩ ॥ ಹೇಡಿ ನೀನೇಕೆ ಮೊದ । ಲೋಡಿ ಬದುಕಿದೆ ನಿನ್ನ । ಕೂಡಿದರಸರ ಕೊಲಿಸುತಧಮ ॥ ರೂಢಿಪರ ಬಿರು ದೇಕೆ । ಬೀಡ ಕೊಡಿಸುವೆ ಯಮನ । ನಾಡೊಳಗೆ ಪೋದವರ ಬಳಿಯ ॥ ೪ ॥ ಹಾರದಿರು ಮದವೇರಿ । ಕಾರೊಂದಕೊಂದು ಕೊಡೆ । ಹಾರಿಸಲು ಸಲ್ಲದೆಂದೆನುತ ॥ ಚೋರರಿರ ನಿಮ್ಮ ಕೌ । ಮಾರಮತಿಗಿತ್ತಿ ದಯ । ಸಾರಿದೆನು ಕೊಡಬೇಡ ತಲೆಯ ॥ ೫ ॥ ಆದಡೀ ಕ್ಷಣ ನೀನು । ಕೈದುವಿಡಿ ನಿನ್ನರಸಿ । ಯೈದೆತನಕವಸಾನವನ್ನು ॥ ಗೈದು ಕೊಡುವೆ ನೆನುತ್ತ । ಕ್ರೋಧದಿಂ ತಿರುಗಿಸುತ । ಹೊಯ್ದ ಮುಸಲದಿ ಮಗಧ ನನ್ನು ॥ ೬ ॥

ಭಾಮಿನಿ.

ಅರಸ ಕೇಳಾ ಮುಸಲಹತಿಯೊಳು । ಧರಣಿಪಾಲ ಗಿರಿವ್ರಜನ ರಥ । ತುರಗ ಸಾರಥಿ ಛತ್ರಧಾರಿಗಳಳಿದರಾ ಕ್ಷಣದಿ ॥ ಹರಣವುಳಿ ಯಲು ಕವಚ ಸೀಸಕ । ವಿರದೆ ಕುಪ್ಪಳಿಸಲ್ಕೆ ಖತಿಯಿಂ । ವಿರಥನಪ ಹಾಯ್ದಂದ ಗದೆಯಂ ಜಡಿದು ಹಲಧರಗೆ ॥ ೧ ॥

ರಾಗ ಭೈರವಿ, ಏಕತಾಳ.

ಧೀರುರೆ ರಥ ಹೋಯ್ತೆನುತ । ಪುಟ । ವೇರದಿರೆಲವೋ ಧೂರ್ತ ॥ ತೇರಿನ ಹಂಗೇತಕ್ಕೆ । ಕೈ । ವಿಾರಲು ತಡೆವುದು ಜೋಕೆ ॥ ೧ ॥ ಕೆಡೆ ಯೆನುತಲೆ ಮಾಗಧನು । ತಿರು । ಹಿಡೆ ಗದೆಯನು ಹಲಧರನು ॥ ತುಡುಕಿದನೆಡಗೈಯಿಂದ । ಅವ । ಘಡಿಸುತಲಿಹುದೇನೆಂದ ॥ ೨ ॥ ರಪಣಗಳೇಕೆಲೊ ಹೂಹೆ । ಭುಜ ರಪಣವು ಭಟಗಾಜಿಗಿಹೆ ॥ ನಿಪುಣ ನಹಡೆ ನಿಲು ನಿಲ್ಲು । ನಾ । ತೃಪುತಿಗೊಳಿಪೆ ಮುಷ್ಟಿಯೊಳು ॥ ೩ ॥ ಎನುತ ಗಿರಿವ್ರಜ ಭುಜವ । ಹೊ । ಯ್ದನುವರಕಿದಿರಾಗಲಿವ ॥ ಕಣ ಕಿಳಿದನು ರಥ ಬಿಸುಟು । ಭುಜ । ವನು ಹೊಡೆಯುತ ಹಲವಿಟ್ಟು ॥ ೪ ॥

ರಾಗ ಸುರುಟಿ, ಮಟ್ಟೆತಾಳ.

ಕಾದಿದರವರು । ಮಾಗಧಬಲರು । ಕಾದಿದರವರು ॥ ಪಲ್ಲ ॥ ನೀಲಾಂಬರ ನಿಲು ನಿನ್ನ । ತೋಳಿನ ಬಲುಹನ್ನು ॥ ಕಾಳಗದೊಳು

ತೋರೆನುತಲೆ । ತಾಳುತ ಕಿನಿಸನ್ನು ॥ ೧ ॥ ಗುದ್ದಿದ ಮಾಗಧನಾತನ। ಹೊದ್ದೈರಗಿದ ಬಲನು ॥ ಬಿದ್ದರು ನೆಲಕಿತ್ತಟ್ಟಿನ। ಯುದ್ಧವಿಶಾರದರು ॥ ॥ ೨ ॥ ಮಾಗಧನನ್ನಡಿಗಿಕ್ಕಿದ । ನೇಗಿಲಗೈಯನು ತಾ ॥ ನಾಗಲಿ ಮೇಲಕೆ ನೆಗೆದನು। ರೇಗಿ ಜರಾಸಂಧ ॥ ೩ ॥

**ಭಾಮಿನಿ.**

ಏಳುತೆತ್ತಿದರಾ ಕ್ಷಣದಿ ಕ। ಟ್ಟಾಳುಗಳು ಗದೆಮುಸಲಗಳನೇ। ವೇಳುವೆನು ಘಾತಿಸಿದರನ್ಯೋನ್ಯದಿ ಮಹಾಭಟರು ॥ ಶೈಲವೆರಡಂ ಪೋಲ್ವ ಬಲನರ। ಪಾಲಕರ ಹತಿ ಸಿಡಿಲಿನಂತಿರೆ । ಕಾಳಗವನಚ್ಚರಿ ಯೊಳೀಕ್ಷಿಸುತಿರ್ದುದಮರಗಣ ॥ ೧ ॥

**ರಾಗ ಶಂಕರಾಭರಣ, ಮಟ್ಟೆತಾಳ.**

ಉಡುಗಣೇಶಕುಲಜ ಕೇಳು । ಕಡುವಿರೋಧದಿ ॥ ಹೊಡೆದು ಕೊಂಡರಾಗ ಹಲಿಯು। ಬಿಡದೆ ಮುಸಲದಿ ॥ ಪೊಡವಿಪಾಲನುರವ ಪೆಗಲ । ಪೊಡೆಯನುಡಿಯನು । ತೊಡೆಯ ನಾಭಿ ಜಂಘೆಗಳನು । ಜಡಿದು ಹೊಯ್ದನು ॥ ೧ ॥ ಕೆರಳಿ ಹಲಿಯನೆದೆಯ ಪೆಗಲ । ಶಿರವ ಜಠರವ। ಭರದೊಳಾತನೆರಗಿದಂತೆ। ಸರುವ ಭಾಗವ ॥ ಧರಣಿಪಾಲ ಹೊಡೆಯಲಿವರ । ಧುರ ಭಯಂಕರ । ತೆರದಿ ತೋರ್ದುದೆನಿತೊ ಶೌರ್ಯ । ದಿರಗಳಿಬ್ಬರ ॥ ೨ ॥ ನೆಗ್ಗಿತವನಿ ಭಟರ ಹತಿಯು । ಲಗ್ಗಿ ಗಮರರು। ಹುಗ್ಗಿದರು ಫಣೀಂದ್ರ ಮೇಣು। ದಿಗ್ಗಜಂಗಳು ॥ ಕುಗ್ಗಿ ತಲ್ಲಣಿಸೆ ಕೆನ್ನೀರ। ಹೆಗ್ಗಡಲಿನೊಳು। ಬಗ್ಗದೊವಲಗಣವು ಮಾಯ। ಲಗ್ಗ ಮುದದೊಳು ॥ ೩ ॥

**ವಾರ್ಧಿಕ್ಯ.**

ಜೈವಾತೃಕಾನ್ವಯನೆ ಕೇಳು ಮಗಧೇಶ್ವರನ । ಜೀವದಾಸೆಯ ಬಿಟ್ಟು ಮಾನಸಕ್ಕಂಜಿಗಳ್ । ಠಾವ ತೆಗೆವಂತೆ ನೃಪತತಿ ಸರಿಯೆ ಭಯದಿಂದ ಹಲಧರನ ಶಕ್ತಿ ಮಿಗಿಲು ॥ ಶ್ರೀವಿಜಯಸತಿಯೊಲ್ದು ಬಲನ ಪೆಗಲಂ ಸೇರ। ಲೀ ವಿಗಡ ಮಾಗಧಂ ಮನದಿ ಕಳವಳಿಸುತಿರೆ। ಗೋವಿಂದನಗ್ರಜಂ ಜಡಿದು ನೇಗಿಲ ವೈರಿಭಟಗೆಂವನತಿರೋಷದಿ॥೧॥

### ರಾಗ ಕೇತಾರಗೌಳ, ಅಷ್ಟತಾಳ.

ಕೇಳೆಲೊ ಮಗಧನೃ । ಪಾಲಾಧಮನೆ ನಿನ್ನ । ಬಾಳುವೆ ಕೊನೆಯಾಯಿತು ॥ ಪೇಳಿಕಳುಹು ಬಂಧು । ಜಾಲಕಂತಿಮ ವಾರ್ತೆ । ಬೀಳ ಮುನ್ನೆನಲೆಂದನು ॥ ೧ ॥ ಗಳಹದಿರೆಲೊ ನಿನ್ನ । ಬಲುಹ ಕುಂದಿಸುತ ನಿ । ರ್ಬಲನಾಗಿಸುವೆ ಭೂಪರ ॥ ಗೆಲಿದ ಗರುವರೋಗ । ಕೊಳಿತು ಮರ್ದಿಇವೆ ನೀ । ತಿಳಿದು ನಿಲ್ಲೆಂದೆನುತ ॥ ೨ ॥ ಪೊಡವಿಪ ಮುಷ್ಟಿಯಿಂ । ದಿಡೆ ಗಣಿಸದೆ ರಾಮ । ನಡಸಿ ಜರಾಸಂಧನ ॥ ಸಿಡಿಲಂತೆ ಗರ್ಜಿಸಿ । ಫಡ ಬೀಳೆಂದೆರಗುತ್ತ । ಹಿಡಿದನು ಮುಂದಲೆಯ ॥ ೩ ॥

### ಕಂದಪದ್ಯ.

ದೃಢದಿಂ ಕೇಳೀ ಪರಿಯೊಳ್ । ಕೊಡಹುತ ಮಗಧೇಶನ ಮುಸಲಾಯುಧ ಖತಿಯಿಂ ॥ ಕಡು ಭಯದಿಂ ಬಲ ಬಾಯ್ಬಿಡೆ । ನುಡಿದಂ ನೃಪನಂ ಪಚಾರಿಸುತ ಬಳಿಕಾಗಳ್ ॥ ೧ ॥

### ರಾಗ ದೇಶಿ, ಅಷ್ಟತಾಳ.

ಏನೆಲವೆಲೊ ಮಗಧ । ಈ ಪರಿ ಸೋತು । ದೇನೆಲವೆಲೊ ಮಗಧ ॥ ಪಲ್ಲ ॥ ಮಾನನಿಧಿಯು ನಿನ । ಗೀ ನಿಕೃಷ್ಟಾವಸ್ಥೆ ॥ ಏನೆಲ ॥ ॥ ಅನುಪಲ್ಲ ॥ ಭೂರಿಬಲಾಢ್ಯ ತಾನೆಂದೆ । ಸೈನ್ಯ । ವಾರಿಧಿಯನು ಕರತಂದೆ ॥ ಮೂರು ಸೂಳಿಗೆ ನಮ್ಮ । ಹೋರಾಟಕೆಂದು ಮ । ತ್ತೀರೀತಿ ಸಿಲುಕುವರೆ । ಬೆಂಬಲಕೀಗ । ಯಾರಾದರೂ ಬಪ್ಪರೆ । ಕೊರಳು ಕೊಯ್ಕ । ವಾರವ ನಚ್ಚುವರೆ ॥ ಏನೆಲ ॥ ೧ ॥ ಹರನ ವರವ ನೀನು ಪಡೆದೆ । ಸರ್ವ । ದೊರೆಮಕ್ಕಳನು ಸೆರೆಗೈದೆ ॥ ವರ ಚೈದ್ಯಬಾಣರು । ಪರಮ ಮಿತ್ರರು ನಿನ್ನ । ಸರಿಯಾರು ಭೂತಳದಿ । ಏಕಚ್ಛತ್ರ । ದರಸು ನೀನೀ ನೇಳ್ಗೆದಿ । ಪೇಳುವುದೇನ । ಚ್ಚರಿ ನಿನಗಾದ ವಿಧಿ ॥ ಏನೆಲ ॥ ॥ ೨ ॥ ಕುಲಹೀನರಾವು ಗೋವಳರು । ನೀವು । ಬಲವುಳ್ಳ ಬಾಹುಜವರರು ॥ ಸಲೆ ನಮ್ಮೊಡನೆ ಸೋತು । ತಲೆಬಾಗಿ ಮನೆಪೊಕ್ಕು । ಲಲನೆಯರಿಗೆ ಮೊಗವ । ತೋರುವೆಯೆಂತು । ಖಳ ನಿನಗುಚಿತ ಸಾವ । ಪರಿಬವೆಂದು । ಬಲ ನೆಗಹಿದ ಹಲವ ॥ ಏನೆಲವೆಲೊ ॥ ೩ ॥

ಭಾಮಿನಿ.

ಗೋಮಿನಿಪ ಕೇಳಾ ಕ್ಷಣದೊಳಾ । ವ್ಯೋಮದಲಿ ನೇಗಿಲನು ತೆಗೆ ತೆಗೆ। ರಾಮ ನಿನ್ನೊಳು ಮಡಿವನಲ್ಲೀ ಮಗಧನದರಿಂದ ॥ ಪ್ರೇಮದಿಂ ನಡೆ ಮಂದಿರಕೆ ಸಂ। ಗ್ರಾಮದೊಳು ಜಯವಾಯ್ತು ನಿನಗೆಂ। ದಾ ಮಹಾ ಸಿಡಿಲಂತೆ ನುಡಿದಡಗಿತು ನಭೋವಚನ ॥ ೧ ॥

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಬಿಟ್ಟನದ ಕೇಳುತ್ತ ಮಗಧನ। ಕೊಟ್ಟಿನಸುದಾನವನು ನೀನಿಂ। ಬಿಟ್ಟುಕೋ ಬುದ್ಧಿಯನು ನಡೆ ನಿಜ। ಪಟ್ಟಣಕ್ಕೆ ॥ ೧ ॥ ಎನುತ ತಿರುಗಿದನಿತ್ತ ಹಲಧರ। ಜನಪರನು ಪರಿಭವಿಸಿ ಭೀಕರ। ಕಣವನುಳಿದವನೀಶರಾಜಿಯೊ। ಳನುವರದೊಳು ॥ ೨ ॥ ಜಾತಭಂಗದ ಭರದಿ ಮಗಧಪ। ಮೇತ ಹಾಯ್ದರು ನಗರಕಲ್ಪ ಪ। ದಾತಿಯಲಿ ಸಂತಪಿಸುತಲಿ ಪರಿ। ಪಾತಬಲರು ॥ ೩ ॥ ಅತ್ತಲಸುರಾರಾತಿ ವೈರಿಜ। ಯೋತ್ತರದ ಸಂತೋಷದಿಂದೂ। ದುತ್ತ ಶಂಖವ ಯಾದವರ ಕೂ। ಡುತ್ತ ಬಳಿಕ ॥ ೪ ॥ ಸಮರರಂಗವ ದಾಟಿ ಬಲು ಸಂ। ಭ್ರಮದಿ ನಗರವ ಪೊಕ್ಕರಭ್ರದೊ। ಳಮರರಬ್ಜಜಹರರು ಜಯವೆನೆ। ಸುಮವ ಸುರಿಸಿ ॥ ೫ ॥

ವಾರ್ಧಿಕ್ಯ.

ಆಯುವಂಶಜ ಲಾಲಿಸಿಂತು ವೈಭವದಿ ನಾ। ರಾಯಣಮುಸಲಿಯರ್ಸಮಸ್ತ ಯದುವೀರರೊಡ । ನಾಯೋಧನದಿ ಜಯಂಬಡೆದು ಮಧುರಾಪುರವ ವಂದಿಮಾಗಧಸಂಕುಲ ॥ ರಾಯಕದಳೀವನದ್ವಿಪರಾಜ ಘನಜಂಝು। ವಾಯು ನೃಪಗಜಪಂಚಮುಖ ಭೂಪವಾರ್ಧಿವಡ। ಬಾಯುಮಾನನೆ ಜಯವೆನುತ್ತ ವಿಜಯಾಂಕನುಂ ಕೈವಾರಿಸಲು ಪೊಕ್ಕರು ॥ ೧ ॥

ಭಾಮಿನಿ.

ಪುರವನಿತೆಯರು ಮುದದಿ ಕೃಷ್ಣನ। ನೆರೆದು ನೋಡಲು ರಥವನಿಳಿಯುತ । ಕರುಣವಾರಿಧಿಯಿಕ್ಕೆಲದಿ ಬಹ ಯಾದವರ ಕೂಡೆ ॥

ಅರಮನೆಯ ಸೇರ್ದಲ್ಲಿ ಹರಿ ಹಲ। ಧರ ಸಹಿತ ಹರಿಪೀಠದೊಳಗೆಸೆ। ದಿರಲು ಕಾಮಿನಿಮಣಿಯರೆತ್ತಿದರಾರತಿಯನೊಲಿದು ॥ ೧ ॥

ರಾಗ ಸುರುಟಿ, ಆದಿತಾಳ.

ಶ್ರೀರಾಮರಾಮಗೆ । ಧಾರುಣಿ । ಭಾರನಿವಾರಣಗೆ ॥ ನೀರದ ಗಾತ್ರಗೆ । ಶಾರಿಗೆ ಖಳಕಂ । ಸಾರಿಗೆ ನತಬೃಂ। ದಾರಕಕುಜಗೆ ॥ ವಾರಿಜದಾರಾತಿ ॥ ೧ ॥ ಸಿಂಧುರವರದನಿಗೆ । ಸುರನರ । ವಂದಿತ ಚರಣನಿಗೆ ॥ ಚಂದದಿ ಶರಣರ । ವೃಂದವ ಕಾವ ಮು। ಕುಂದಗೆ ನಿತ್ಯಾ । ನಂದಗೆ ಸತಿಯರು ॥ ಕುಂದಣದಾರಾತಿ ॥ ೨ ॥ ರಾಮಗೆ ಕೃಷ್ಣನಿಗೆ। ಮಾಗಧ। ಭೀಮ ಮಹಾಭುಜಗೆ ॥ ತಾಮರಸಾಕ್ಷಗೆ । ಕಾಮಿತಮೀವಗೆ। ಸಾಮಜಗಮನದ । ಶ್ಯಾಮೆಯರೆಲ್ಲರು ॥ ಪ್ರೇಮ ದೊಳಾರತಿ ॥ ೩ ॥

ಭಾಮಿನಿ.

ಗಜಪುರಾಧಿಪ ಲಾಲಿಸಿಂತಾ। ಸುಜನಹಿತವಿಗ್ರಹರು ಖಳಭೂ। ಭುಜರ ಕಟಕವ ಸದೆದು ವಸುಧೆಯ ಭಾರವನು ಕಳೆದು ॥ ಭಜಿಪ ತನ್ನೇಕಾಂತ ಸಾಧು। ವ್ರಜವ ರಕ್ಷಿಸುತಲೆ ಮಧುರೆಯೊಳು । ನಿಜ ವಿನೋದದೊಳಿರ್ದರಾ ನಿತ್ಯಾತ್ಮಹಲಧರರು ॥ ೧ ॥

ರಾಗ ಸೌರಾಷ್ಟ್ರ, ತ್ರಿವುಡೆತಾಳ.

ಇಂತೆಸೆವ ಸತ್ಕಥೆಯ ಗೋಪೀ । ಕಾಂತನೊಲವಿಂ ಶುಕಮು ನೀಂದ್ರನು । ದಂತಿಪುರಪತಿಗುಸುರೆ ಕೇಳ್ದತಿ । ಸಂತಸದೊಳು ॥ ೧ ॥ ಜಗದಧೀಶನ ಮನುಜಲೀಲೆಯ। ಪೊಗಳಲಸದಳವೆನುತ ಕೀರ್ತಿಸು। ತಗಧರನನಿರುತಿರ್ದ ಭೂಪನು। ಮಿಗೆ ಸುಖದೊಳು॥ ೨ ॥ ಶೈಲಜಾರ್ಧ ಶರೀರನಹ ಪೆರ । ಡಾಲವರ ಉದನೇಶದಾಸ ಸು। ಶೀಲ ಸದ್ಗುಣ ವೆಂಕಟಾಚಲ । ಬಾಲ ಕೃಷ್ಣ ॥ ೩ ॥ ಮಹಿತಜನಸಂಸ್ಕೃತಸುವಿದ್ಯಾ। ಗೃಹದ ದೇಶೀಭಾಷೆಯೋಜನು । ಅಹಿಶಯನಕಥೆಯಿದನು ಪೇಳಿದೆ। ಮಹಿಗೊರಲ್ದು ॥ ೪ ॥ ಯಕ್ಷಗಾನದಿ ತಪ್ಪಿರಲ್ಕೆ ವಿ। ಚಕ್ಷಣರು ಸರಿಗೊ ಳಿಸಿ ನೋಳ್ಪುದು। ಪೇಕ್ಷಿಸದೆ ಗುಣವನೆಸದಾ ಹರಿ। ರಕ್ಷಿಸುವನು ॥ ೫ ॥

ಭಾಮಿನಿ.

ಶಾಲಿವಾಹನಶಕದ ನಭನಿಗ। ಮಾಳಿ ದಿಕ್ಚಂದ್ರಮರ ಸಂಖ್ಯೆಯ। ಕಾಲಯುಕ್ತಿಯ ವತ್ಸರದೊಳಾಷಾಢಮಾಸದಲಿ ॥ ನೀಲಪಕ್ಷ ದ್ವಾದಶಿಯ ದಿನ। ಪೇಳಿದೆನು ಶಿವಕೃಪೆಯೊಳೀ ಹರಿ। ಲೀಲೆಯನು ಪೊರೆಗನವರತ ಸಜ್ಜನರ ನಿತ್ಯಾತ್ಮ॥ ೧ ॥

ರಾಗ ಭೂಪಾಳಿ, ತ್ರಿವುಡೆತಾಳ.

ಮಂಗಲಂ ಜಯ। ಮಂಗಲಂ ಶುಭ। ಮಂಗಲಂ ನಿತ್ಯಾತ್ಮಗೆ॥ ಮಂಗಲಂ ಜಯ। ಮಂಗಲಂ ಶುಭ। ಮಂಗಲಂ ಸರ್ವಾತ್ಮಗೆ॥ ಪಲ್ಲ॥ ರಂಗ ಕರುಣಾ । ಪಾಂಗ ಖಳನೃಪ । ಭಂಗ ಜಲದನಿಭಾಂಗಗೆ ॥ ತುಂಗಭುಜ ಸ । ತ್ಸಂಗ ವರಗೋ । ಪಾಂಗನಾಳಿಭುಜಂಗಗೆ ॥ ಮಂಗಲಂ ॥ ೧ ॥ ನಂದಹೃದಯಾ । ನಂದವರ್ಧನ । ಇಂದಿರೇಶಮುಕುಂದಗೆ ॥ ಸುಂದರಾಂಬುಜ । ಕಂದಸುರನರ। ವಂದಿತಾಂಘ್ರಿದ್ವಂದ್ವಗೆ ॥ ಮಂಗಲಂ ॥ ೨ ॥ ಈಶ ಸಜ್ಜನ। ಪೋಷ ಹಿಮಗಿರಿ। ಜೇಶ ಪನ್ನಗಭೂಷಗೆ ॥ ಕೇಶವಾಪ್ತ ಸು । ರೇಶನುತ ನಭ। ಕೇಶ ಶ್ರೀ ಉದನೇಶಗೆ॥ ಮಂಗಲಂ॥ ೩ ॥ ೨೯೮ ॥ ಶ್ರೀಃ ॥

ಸಂಧಿ ೨ಕ್ಕೆ ಪದ ೬೬೪ಕ್ಕೆ ಮಂಗಲಂ.



**ಸರ್ವೇ ಜನಾಃ ಸುಖಿನೋ ಭವಂತು.**



# ಕನ್ನಡಲಿಪಿಯ ಪ್ರಸಂಗಗಳು.

| | |
|---|---|
| ಅರ್ಥ ಸಹಿತ ಚೂಡಾಮಣಿ ಪ್ರಸಂಗ ... ... ... | 0-10-0 |
| ಬಭ್ರುವಾಹನಕಾಳಗ ... ... ... | 0-6-0 |
| ಭೀಷ್ಮಪ್ರಪಂಚ ... ... ... ... | 0-3-0 |
| ಮೈರಾವಣಕಾಳಗ ... ... ... ... | 0-3-0 |
| ರಾಮಾಂಜನೇಯಕಾಳಗ ... ... ... ... | 0-6-0 |
| ಮಕರಾಕ್ಷಕಾಳಗ ... ... ... ... | 0-2-0 |
| ಮಾರೀಮುಖನಕಾಳಗ ... ... ... ... | 0-4-0 |
| ಕುಮುದಾಕ್ಷಿಕಲ್ಯಾಣ ... ... ... | 0-5-0 |
| ತರಣಿಸೇನಕಾಳಗ ... ... ... ... | 0-3-0 |
| ಮದಾಲಸೆಕಲ್ಯಾಣ ... ... ... ... | 0-3-0 |
| ರಾವಣೋದ್ಭವ ... ... ... ... | 0-4-0 |
| ರಾವಣಪ್ರತಾಪ ... ... ... ... | 0-5-0 |
| ಕಾರ್ತವೀರ್ಯಾರ್ಜುನಕಾಳಗ ... ... ... | 0-5-0 |
| ಪುತ್ರಕಾಮೇಷ್ಟಿ (ಸೀತಾಕಲ್ಯಾಣ) ... ... ... | 0-4-0 |
| ರಾಮಪಟ್ಟಾಭಿಷೇಕ (ಅಯೋಧ್ಯಾಕಾಂಡ) ... ... | 0-4-0 |
| ರಾಮರಾಜ್ಯವಿಯೋಗ ... ... ... | 0-5-0 |
| ಪಾದುಕಾಪಟ್ಟಾಭಿಷೇಕ ... ... ... ... | 0-4-0 |
| ಪಂಚವಟಿ ವಾಲಿಸುಗ್ರೀವರಕಾಳಗ ... ... ... | 0-4-0 |
| ಸೇತುಬಂಧನ ... ... ... ... | 0-3-0 |
| ಅಂಗದಸಂಧಾನ ... ... ... ... | 0-3-0 |
| ಅತಿಕಾಯಕಾಳಗ ... ... ... ... | 0-4-0 |
| ಕಾಲನೇಮಿಕಾಳಗ ... ... ... ... | 0-5-0 |
| ಇಂದ್ರಜಿತುಕಾಳಗ ... ... ... ... | 0-2-0 |
| ಕುಂಭಕರ್ಣಕಾಳಗ ... ... ... ... | 0-2-0 |
| ರಾವಣಾಸುರಕಾಳಗ ... ... ... ... | 0-4-0 |


ಪಾವಂಜೆ ಗುರುರಾವ್,

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.